

# ಹಿಂಗಾರ



ಅರೆಭಾಷೆ ತ್ರೈಮಾಸಿಕ

ಸಂಪುಟ-4 ಸಂಚಿಕೆ-1 ದಿನಾಂಕ : 31.03.2020 ಕೊಡಗು ರೂ. 20/-

ಜನವರಿ - ಫೆಬ್ರವರಿ - ಮಾರ್ಚ್

2020



ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ



ಅವಂದೂರು ಗ್ರಾಮಲಿ ನಡ್ದ ಅರೆ ಬಾಸೆ ಸಂಸ್ಕೃತಿಲಿ ಕಿಡ್ಡಾಸ ಹಬ್ಬದ ಉದ್ಘಾಟನೆ.



ಅರೆಬಾಸೆ ಜಾನಪದ ಕಲಾವಿದರಿಗೆ ಸಾಂಸ್ಕೃತಿಕ ಪರಿಕರಗಳ ವಿತರಣೆ



ರಾಜಸೀಟ್ ಉದ್ಯಾನವನಲಿ 'ಫಲಪುಷ್ಪ ಪ್ರದರ್ಶನ
ಕಾರ್ಯಕ್ರಮಲಿ' ಅರೆಬಾಸೆ ಗೌಡ ಸಾಂಸ್ಕೃತಿಕ ಕಾರ್ಯಕ್ರಮ





ಕರ್ನಾಟಕ ಸರಕಾರ

**ಕನ್ನಡ ಮತ್ತು ಸಂಸ್ಕೃತಿ ಇಲಾಖೆ**

**ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಮಡಿಕೇರಿ**

# ಹಿಂಗಾರ

**ಅರೆಭಾಷೆ ತ್ರೈಮಾಸಿಕ**

ಸಂಪುಟ : 4 ಸಂಚಿಕೆ : 1 ದಿನಾಂಕ : 31–03–2020

## ಸಂಪಾದಕ ಮಂಡಳಿ

**HINGARA**
A Quarterly Magazine
Published by
**Karnataka**
**Arebhase Samskruthi**
**Mathu Sahitya Academy**
Coffee Krip, 1st Floor
Rajaseat Road
Madikeri - 571 201
Ph : 08272-223055
arebaseacademy@gmail.ocm
www.arebaseacademy.com

Chief Editor :
**Lakshminarayana Kajegadhe**

Editor :
**Dr. Dayananda Kudakandi**

Managing Editor :
**Chinnaswamy**

Cover Page Photo :
**Shashigowda, Photogenics**

Printed at :
**Sri Krishna Printers**.
Pooja Arcade, Madikeri
Ph. 08272-224919, 9448135592

Pages : 88

Copis : 1200

Vol : 4 - 13

Period : January to March

Price : Rs. 20

3year subscription :
Rs. 200

**ಹಿಂಗಾರ**
ತ್ರೈಮಾಸಿಕ ಪತ್ರಿಕೆ
ಪ್ರಕಾಶಕರು
**ಕರ್ನಾಟಕ**
**ಅರೆಭಾಷೆ ಸಂಸ್ಕೃತಿ ಮತ್ತು**
**ಸಾಹಿತ್ಯ ಅಕಾಡೆಮಿ**
ಕಾಫಿ ಕೃಪಾ, ಒಂದನೇ ಮಹಡಿ,
ರಾಜಸೀಟ್ ರಸ್ತೆ, ಮಡಿಕೇರಿ-571201
ದೂರವಾಣಿ : 08272-223055
arebaseacademy@gmail.ocm
www.arebaseacademy.com

ಪ್ರಧಾನ ಸಂಪಾದಕರ್ :
**ಲಕ್ಷ್ಮಿನಾರಾಯಣ ಕಜೆಗದ್ದೆ**

ಸಂಪಾದಕರ್ :
**ಡಾ. ದಯಾನಂದ ಕೂಡಕಂಡಿ**

ವ್ಯವಸ್ಥಾಪಕ ಸಂಪಾದಕರ್ :
**ಚಿನ್ನಸ್ವಾಮಿ**

ಮುಖಪುಟ ಚಿತ್ರ :
**ಶಶಿಗೌಡ ಫೋಟೋಜೆನಿಕ್ಸ್, ಸುಳ್ಯ**

ಮುದ್ರಣ
**ಶ್ರೀ ಕೃಷ್ಣ ಪ್ರಿಂಟರ್ಸ್**
ಪೂಜಾ ಆರ್ಕೇಡ್, ಮಡಿಕೇರಿ.
Ph. 08272-224919, 9448135592

ಪುಟಗಳು : 88

ಪ್ರತಿಗಳು : 1200

ಸಂಪುಟ 4 ಸಂಚಿಕೆ 13

ಜನವರಿ - ಮಾರ್ಚ್

ಬೆಲೆ : ರೂ. 20/-

ತ್ರೈವಾರ್ಷಿಕ ಚಂದಾ :
ರೂ. 200

# ಅಧ್ಯಕ್ಷರ ನುಡಿ



ಎಲ್ಲವುಕು ನಮಸ್ಕಾರ.

ಮತ್ತೊಂದು ಹಿಂಗಾರ ಸಂಚಿಕೆ ಸಿಂಗರಿಸಿ ಕಂಡ್ ಇನ್ನೇನ್ ನಿಮ್ಮ ಮನೆ ಬಾಗ್ಲಿಗೆ ಬರುವ ಹೊತ್ತು.

ನಮ್ಮ ಅರೆಬಾಸಿಗರ್ ಬಾಳಾ ಸಂಖೆಲಿ ಅವರ ಅನುಭವಕ್ಕೆ ಬಂದ ಸಂಗತಿಗಳ ಬಗ್ಗೆ ತಮಿಗೆ ಅನ್ಸಿದ ರೀತಿಲಿ ಬರೇದು ನೋಡಿ ನಿಜಕ್ಕೂ ಕುಸಿ ಆದೇ. ಆದರೆ ಇದ್ ಮೂರು ತಿಂಗಳಿಗೊಮ್ಮೆ ಅಕಾಡೆಮಿಯ ಮೂಲಕ ಬರುವ ಪತ್ರಿಕೆ ಆದ ಕಾರಣ ನಾವಿಗೆ ಬಂದ ಎಲ್ಲಾ ಬರವಣಿಗೆಗಳನ ಹಾಕಿ ಕಣಿಕೆ ಆದುಲೆ. ಆದೂ ಅಲ್ಲದೆ ನಾವು ನಮ್ಮ ಓದುವವುಕೆ ತಕ್ಕ ಮಟ್ಟಿಗೆ ಒಳ್ಳ ಬರವಣಿಗೆಗಳನ್ನೇ ಉಣ್ನೋಕುತೇಳುದು ನಮ್ಮ ಮನ್ಸಿಲಿ ಉಟ್ಟು. ಹಂಗಿರ್ಕಾಕನ ನಮಿಗೆ ಬಂದ ಬರವಣಿಗೆಗಳನ್ನ ಓದಿ ಆಯ್ಕೆ ಮಾಡಿ ಹಾಕುವ ಪರಿಸ್ಥಿತಿ. ಆದರೆ ನಾವು ಬರ್ದದ್ದನ್ನ ಹಾಕಿತ್ಲೆಂತ ಹೇಳಿ ಯಾರೂ ಬೇಜಾರ್ ಮಾಡಿಕಣಿಕೆ ಬೊತ್ತು. ಹೆಂಗೆ ನಮ್ಮ ಬರವಣಿಗೆನ ಇನ್ನೂ ಲಾಯ್ಕ ಮಾಡಾಕ್ ತೇಳುವ ಯೋಚನೆ ನಮ್ಮಲ್ಲಿ ಇರಕು. ಆಗ ಪತ್ರಿಕೆನೊಟ್ಟಿಗೆ ಬಾಸೆ, ಸಂಸ್ಕೃತಿ ಬೆಳಿಯಕೆ ಸಾಧ್ಯ. ಅರೆಬಾಸೇಲಿ ಒಳ್ಳೊಳ್ಳ ಸಾಹಿತ್ಯ ಕೃತಿಗ ಬರೋಕು. ಆಗ ನಮ್ಮ ಬಾಸೆ ಮತ್ತೊಂದು ಬಾಸೆನ ಸಮಕ್ಕೆ ನಿತ್ ಉಳಿಯಕೆ ಸಾಧ್ಯ. ಹಂಗೇ ಈ ಸಲದ ಸಂಚಿಕೆನ ಸೊಲ್ಪ ಬೇರೆ ರೀತಿಲಿ ತರುವ ಪ್ರಯತ್ನ ಮಾಡ್ಯೊಲೊ. ಗೆರೆಗಳ ಮೂಲಕ ಇಲ್ಲಿ ಬರವಣಿಗೆಗೆ ಜೀವ ತುಂಬಿಯೊಲೊ ನಾಡ್‌ನ ಹೆಸ್ರುವಾಸಿ ಚಿತ್ರ ಕಲಾವಿದ ಬಿ.ಎಸ್. ಸತೀಶ್ ಆಚಾರ್. ಇನ್ನೂ ಮುಂದಿನ ಸಂಚಿಕೆಲೂ ಅವು ನಮ್ಮೊಟ್ಟಿಗೆ ಇದ್ದ್, ಹಿಂಗಾರನ ಮತ್ತಷ್ಟು ಪೊಲ್ಲುಕ್ ಕಾಣಿಸುವೆ. ನೀವುಗೆ ಈ ಪ್ರಯತ್ನ ಕುಸಿ ಆದು ಅಂದುಕೊಂಡವೆ. ಪ್ರತೀ ಮನೇಲೂ ಹಿಂಗಾರ ಇರೋಕುಂತೇಳುದು ನಮ್ಮ ಆಸೆ. ಅದಕ್ಕೆ ನೀವೂ ಸಹಕರಿಸೋಕು. ನೀವು ಓದಿ, ಬರೇನಿ, ನೆರೇಕರೆಯವುಕು ಪ್ರೋತ್ಸಾಹ ಕೊಡಿ. ಸಾಹಿತ್ಯ, ಸಂಸ್ಕೃತಿ ಬೆಳವಣಿಗೆಗೆ ಈ ಕೊಡುಕೊಳ್ಳುವಿಕೆ ತೀರಾ ಅಗತ್ಯ.

...ವಂದನೆಗ

✍ಲಕ್ಷ್ಮೀ ನಾರಾಯಣ ಕಜೆಗದ್ದೆ
ಅಧ್ಯಕ್ಷರ್

# ಸಂಪಾದಕೀಯ



ಅರೆಬಾಸೆನ ಹಿಂಗಾರ ತ್ರೈಮಾಸಿಕ ಓದುವ ಎಲ್ಲ ಅರೆಬಾಸಿಕರಿಗೆ ನಮಸ್ಕಾರಗ. ನಾಲ್ಕ್ ವರ್ಷಗಳ್‌ಂದ ನಿರಂತರಾಗಿ ಓದುದರೊಟ್ಟಿಗೆ ನಮ್ಗೆ ಮೌಲ್ಯದ ಬರಹಗಳ್ನ ಕೊಟ್ಟ್ ಸಹಕರಿಸ್ತಿರುವ ನಿಮ್ಗೆಲ್ಲ ಅಭಿನಂದನೆಗ. ಇದ್ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಹೊರತಂದ ನಾಲ್ಕನೆ ಸಂಪುಟದ ಸುರುನ ಸಂಚಿಕೆ.

ಈ ಹಿಂಗಾರ ಸಂಚಿಕೆಲಿ ಜನವರಿಂದ ಮಾರ್ಚ್‌ಗೆ ಮುಟ್ಟ ಸಂಗತಿಗಳ್‌ನ ಸಂಕಲಿಸ್ಯೊಳೊ. ಇದ್ ಮಾರ್ಚ್ ತಿಂಗಲ್ಲಿ ಪ್ರಕಟ ಆಕಾಗಿತ್. ಆದರೆ ಕೋವಿಡ್-19 ರ್‌ಂದಾಗಿ ಸಂಚಿಕೆನ ಹೊರತಾಕೆ ಆತ್ಲೆ. ಅದ್ಕಾಗಿ ಚಂದಾದರರ್, ಓದುಗರ್ ಮತ್ತೆ ಬರಹಗಾರ್ಲಿ ಕ್ಷಮೆ ಕೇಳ್‌ತೊಳೆ. ಇನ್ನ್ ಹೀಂಗೆ ಆಗದಾಂಗೆ ಪ್ರಯತ್ನಪಟ್ಟವೆಂತ ಭರವಸೆ ಕೊಟ್ಟವೆ.

ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ನಾಲ್ಕನೆಯ ಸಮಿತಿಯ ಅಧ್ಯಕ್ಷರಾದ ಶ್ರೀಯುತ ಲಕ್ಮೀ ನಾರಾಯಣ ಕಜೆಗದ್ದೆನವು, ಸಮಿತಿಯ ಎಲ್ಲಾ ಸದಸ್ಯರ್‌ಗ ಮತ್ತೆ ರಿಜಿಸ್ಟ್ರಾರ್ ಒಮ್ಮತಂದ ಡಾ.ದಯಾನಂದ ಕೂಡಕಂಡಿ ಆದ ನನ್ನ ಸಂಪಾದಕನಾಗಿ ಮತ್ತೆ ಶ್ರೀಯುತ ಪುರುಷೋತ್ತಮ ಕಿರ್ಲಾಯರನ್ನ ಸಹ ಸಂಪಾದಕಾಗಿ ನಮ್ಮ ಮೇಲೆ ವಿಶೇಷವಾದ ನಂಬಿಕೆಂದ ಈ ಜವಬ್ದಾರಿನ ನೀಡ್ಯೊಳೊ. ಅವುಕೆ ನಮ್ಮ ಧನ್ಯವಾದಗ.

ನಮ್ಮ ಹೊಸ ಸಂಪಾದಕೀಯ ಮಂಡಳಿ, ಹಿಂಗಾರ ತ್ರೈಮಾಸಿಕ ಪುಸ್ತಕನ ಅರೆಬಾಸೆ ಮಾತಾಡುವ ಮತ್ತೆ ಓದ್ವರ ಮನೆ ಬಾಗ್‌ಲ್‌ಗೆ ತಲ್‌ಪುಸೊಕು ಅಂತ ಗುರಿನ ಇಟ್ಟುಕೊಂಡುಟ್ಟು. ಹಳೆ ಬೇರ್ ಹೊಸ ಚಿಗ್‌ರ್ ನೋಡಿಕೆ ಲಾಯ್ಕ ಅಂತ ಹೇಳುವಂಗೆ, ಇಂದ್ ಅರೆಬಾಸೆನ ಮಾತಾಡ್ವ ಮಕ್ಕಳ್ನ, ಹತ್ ವರ್ಷಲಿ ಅರೆಬಾಸೆನ ಲೇಖಕರಾಗಿ ಮಾಡುವ ನಿಟ್ಟ್‌ಲಿ, ಹಿರಿಯರ ಮಾರ್ಗದರ್ಶನದಂಗೆ ಪ್ರಯತ್ನ ಪಟ್ಟದೆ.

ಈ ಹಿಂಗಾರ ತ್ರೈಮಾಸಿಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಜನವರಿಂದ ಮಾರ್ಚ್ ತಿಂಗಳ ಮುಟ್ಟ ನಡ್ಸಿದ ಕಾರ್ಯಕ್ರಮಗಳನ್ನ ಪರಿಚಯಿಸಿದೆ. ಇದರ ಜೊತೆಗೆ ಎಸ್.ಎಸ್.ಎಲ್.ಸಿ ಪರೀಕ್ಷೆಲಿ ರಾಜ್ಯಕ್ಕೆ ಒಂದನೇ ಸ್ಥಾನ ಪಡ್ದ ನಮ್ಮ ಜನಾಂಗದ ಹೈದ ಕು. ಅನುಷ್ ಎ.ಎಲ್. ನ ಕಿರು ಪರಿಚಯ ಮತ್ತೆ

ನಮ್ಮ ಜನಾಂಗದ ಯುವ ವಿಜ್ಞಾನಿ ಡಾ. ಹರ್ಷಿತಾ ಅಯ್ಯಪ್ಪ ಬಾರಿಕೆ ಇವರ ಪರಿಚಯಿಸೊಳೊ. ಜೊತೆಲಿ ಅಂಚೆ ಇಲಾಖೆ ಕೂಜುಗೋಡು ಕಟ್ಟೆಮನೆ ದಿ.ವೆಂಕಟ್ರಮಣ ಗೌಡ್ರ ಸರ್ಮಣಾರ್ತ ಅಂಚೆ ಲಕೋಟೆನ ಬಿಡ್‌ಗಡೆ ಮಾಡ್ದ್‌ರಂದ ಇವರ ಕಿರು ಪರಿಚಯನ ಕೂಡ ಮಾಡ್ಯೊಳೊ. ಅಲ್ಲದೆ ಕ್ರಾಸ್‌ಕಂಟ್ರಿ ಮತ್ತೆ ಮ್ಯಾರಥಾನ್‌ಲಿ ವಿಶೇಷ ಸಾಧನೆ ಮಾಡ್ದ ಕ್ಯಾಪ್ಟನ್ ಹೊಸೊಕ್ಲು ಚಿಣ್ಣಪ್ಪನವರ್‌ನ ಕೂಡ ಪರಿಚಯಿಸ್ಯೊಳೊ. ಕೃಷಿ ಪಂಡಿತ ಪ್ರಶಸ್ತಿ ಪಡ್ದ ಮಂದ್ರೀರ ತೇಜಸ್ಸ್ ನಾಣಯ್ಯರವ್‌ರ ಸಮಗ್ರ ಕೃಷಿ ಅನುಭವನ ಹಂಚಿಕೊಂಡೊಳೊ, ಡಾ. ಪುರುಷೋತ್ತಮ. ಕೆ.ವಿ. ಯವು ಅರೆಬಾಸೆಲಿ ಬರ್ದ ಪೊದ್ಯ ಪುಸ್ತಕಗಳ ಅವಲೋಕಿಸ್ಯೊಳೊ, ಹೊಳೆಕರೆ ಚಂಗಪ್ಪನವರ ಯೋಗ ಒಂದು ಜೀವನ ಕ್ರಮ ಅಂತ ಮತ್ತೆ ಶ್ರೀಮತಿ ಸಂಗೀತ ರವಿರಾಜ್ ಅವು ಪುಂಸ್ತ್ರೀ ಕೃತಿನ ಪರಿಚಯನ ಮಾಡ್ಯೊಳೊ. ಇಂದ್ ಯುವ ಜನರ್‍ರಲಿ ಸಾಹಿತ್ಯ ಓದುವ ಹವ್ಯಾಸ ಕಡಿಮೆ ಆಗುಟ್ಟು. ಜನರಲ್ಲಿ ಸಾಹಿತ್ಯ ಆಸಕ್ತಿಯನ್ನ ಜಾಸ್ತಿ ಮಾಡುವ ಉದ್ದೇಶಂದ ಈ ಸರ್ತಿನ ಸಂಚಿಕೆಲಿ ಬನ್ನಿ 'ಓದೋಮೊ'ಂತೇಳುವ ಅಂಕಣನ ಸುರು ಮಾಡ್ಯೊಳೊ. ಹಾಂಗೆ ಹಲವಾರ್ ಹಿರಿಯರ್, ಕಿರಿಯರ ಕತೆಗಳ್‌ನ, ಕವನಗಳ್‌ನ, ಲೇಖನಗಳ್‌ನ ಈ ಸಂಚಿಕೆಲಿ ಪ್ರಕಟಿಸ್ಯೊಳೊ. ಈ ಬರವಣಿಗೆಗೆ ಚಿತ್ರ ಕಲಾವಿದ ಬಿ.ಎಸ್. ಸತೀಶ್ ಆಚಾರ್‌ನವು ಗೆರೆಗಳ ಮೂಲಕ ಜೀವ ನೀಡ್ಯೊಳೊ.

ಈ ಸಂಚಿಕೆನ ಹೊರತಾಕೆ ಅಕಾಡೆಮಿ ಅಧ್ಯಕ್ಷರ್, ಸಹ ಸಂಪಾದಕರ್, ಸರ್ವ ಸದಸ್ಯರ್, ರಿಜಿಸ್ಟ್ರಾರ್ ಸಹಕರಿಸ್ಯೊಳೊ. ಬರಹಗಾರರ್ ತಮ್ಮ ಅಮೂಲ್ಯವಾದ ಬರವಣಿಗೆಗಳ್‌ನ ನೀಡಿ ಸಂಚಿಕೆ ಮೌಲ್ಯನ ಹೆಚ್ಚಿಸ್ಯೊಳೊ. ಪ್ರತಿ ತಿದ್ದುವಲ್ಲಿ ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪನವು ಕೈ ಜೋಡಿಸ್ಯೊಳೊ. ಶಶಿಗೌಡ ಪೋಟೋಜೆನಿಕ್ಸ್, ಸುಳ್ಯ ಇವು ಸಂಚಿಕೆನ ಮುಖಪುಟದ ಪೋಟೊ ನೀಡ್ಯೊಳೊ. ಶ್ರೀ ಕೃಷ್ಣ ಪ್ರಿಂಟರ್ಸ್, ಮಡಿಕೇರಿ ಇವು ಲಾಯ್ಕಲಿ ಮುದ್ರ್‌ಸಿ ಸಹಕರಿಸ್ಯೊಳೊ. ಸಂಚಿಕೆ ಪ್ರಕಟಿಸಿಕೆ ಸಹಕರ್‌ಸಿದ ಎಲ್ಲವ್ಕೆ ಹೃದಯ ತುಂಬಿದ ಕೃತಜ್ಞತೆಗಳ್‌ನ ನಾವು ಅರ್ಪ್‌ಸುವೆ.

✍ ಡಾ. ದಯಾನಂದ ಕೂಡಕಂಡಿ
ಸಂಪಾದಕ

ದಿನಾಂಕ : 25.03.2020

ಪ್ರಕಟ ಆದ ಬರವಣಿಗೆಗೆ ಆಯಾ ಬರಹಗಾರರೆ ಜವಾಬ್ದಾರರ್.

# ಹಿಂಗಾರ ಒಡ್ಸ್‌ಕನ

ವ್ಯಕ್ತಿ ಪರಿಚಯ

# ಕ್ರಾಸ್ ಕಂಟ್ರಿ ಮತ್ತೆ ಮ್ಯಾರಥಾನ್‌ಲಿ ಸಾಧನೆ ಮಾಡ್ದ ಕ್ಯಾಪ್ಟನ್ ಹೊಸೊಕ್ಲು ಚಿಣ್ಣಪ್ಪ



ಕ್ರಾಸ್‌ಕಂಟ್ರಿ ಮತ್ತೆ ಮ್ಯಾರಥಾನ್‌ಲಿ ವಿಶ್ವ ದಾಖಲೆ ಮಾಡ್ದ ಕ್ಯಾಪ್ಟನ್ ಹೊಸೊಕ್ಲು ಚಿಣ್ಣಪ್ಪರವರ್ನ ಹಿಂಗಾರ ತ್ರೈಮಾಸಿಕಲಿ ಪರಿಚಯಿಸಿಕೆ ತುಂಬಾ ಖುಷಿಯಾದೆ. ಇವು ವಿರಾಜಪೇಟೆ ತಾಲೂಕು ಸಿದ್ದಾಪುರ ಗುಹ್ಯ ಗ್ರಾಮದ ಹೊಸೊಕ್ಲು ಅಪ್ಪಚ್ಚು (ಮಾಜಿ ಸೈನಿಕ) ಮತ್ತೆ ಪೊನ್ನಮ್ಮ ದಂಪತಿಗಳ ಮಂಙನಾಗಿ ಜನವರಿ 27, 1966ರ್‌ಲಿ ಜನಿಸಿದೊ. 1 ರ್‌ಂದ 7ನೇ ಕ್ಲಾಸ್ ವರೆಗೆ ಸಿದ್ದಾಪುರದ ಸರಕಾರಿ ಜಿ.ಎಂ.ಪಿ. ಶಾಲೆಲಿ ಮತ್ತೆ ಸಿದ್ದಾಪುರ ಸರ್ಕಾರಿ ಹೈಸ್ಕೂಲ್‌ಲಿ ಪ್ರೌಢ ಶಿಕ್ಷಣ ಮಾಡ್‌ದೊ. ಇವು ಶಾಲೆಗೆ ಹೋಗ್‌ತಿರ್‌ಕನ ಓಟದ ಸ್ಪರ್ಧೆಲಿ ಸ್ಕೂಲ್‌ಗೆ, ತಾಲೂಕ್‌ಗೆ ಮತ್ತೆ ಜಿಲ್ಲಾ ಮಟ್ಟಲಿ ಭಾಗವಹಿಸಿ ತುಂಬಾ ಇನಾಂ ಮತ್ತೆ ಸರ್ಟಿಫಿಕೇಟ್ ತಕೊಂಡೊಲೊ.

1984ರ ಆಗಸ್ಟ್ ತಿಂಗ ವಿರಾಜಪೇಟೆಲಿ ಆರ್ಮಿ ಸೆಲೆಕ್ಷನ್ ಕ್ಯಾಂಪ್ ಇತ್ತ್. ಅವು ಹತ್ರ ಇದ್ದ ಸ್ಪೋರ್ಟ್ಸ್ ಸರ್ಟಿಫಿಕೇಟ್ ತಕಂಡ್ ಸೆಲೆಕ್ಷನ್ ಕ್ಯಾಂಪ್‌ಗೆ ಹೋಗಿದ್ದೊ. ಒಬ್ಬ ಆರ್ಮಿ ಆಫೀಸರ್ ಕರ್ನಲ್ ದಿಲ್‌ಬರ್ ಸಿಂಗ್ ಎಂಬವು ಇವರ ಹತ್ರ ಬಂದ್ ಇವ್ರ ಕೈಲಿದ್ದ ಸ್ಪೋರ್ಟ್ಸ್ ಸರ್ಟಿಫಿಕೇಟ್ ತಗೊಂಡ್ ಇವರ್‌ನ ಅವರ ಆಫೀಸ್‌ಗೆ ಕರ್‌ಕೊಂಡ್ ಹೋಗಿ, ಆರ್ಮಿಗೆ ಸೇರಿಕೆ ಖುಷಿ ಉಟ್ಟಾಂತ ಕೇಳ್ದೊ. ಆಗ ಇವು ಯಸ್ ಸಾರ್‌ಂತ ಹೇಳ್ದೊ. ಹಂಗೆನೆ ಎತ್ತರ, ತೂಕ, ಎದೆಯ ಸುತ್ತಳತೆ ಮತ್ತೆ ಸಣ್ಣಪುಟ್ಟ ಮೆಡಿಕಲ್ ಮಾಡಿ ಸಂಜೆ 6 ಗಂಟೆಗೆ ಕ್ಯಾಂಪ್‌ಗೆ ಬಾಕೆ ಹೇಳ್ದೊ. ಅವು ಗೋಣಿಕೊಪ್ಪ ಹಾಸ್ಟೆಲ್‌ಗೆ ಹೋಗಿ ಜೊತೆಯವುಕೆ ಹೇಳಿ ಮನೆಗೆ ಹೋಗಿ ಅಮ್ಮನ ಆಶೀರ್ವಾದ ತಕಂಡ್ ಆರ್ಮಿ ಸೆಲೆಕ್ಷನ್ ಕ್ಯಾಂಪ್‌ಗೆ ಹೋದೊ. ಕ್ಯಾಂಪ್‌ಗೆ ಸೆಲೆಕ್ಷನ್ ಆದ ಮೂವತ್ತು ಹೈದಂಗ ಇದ್ದೊ. ಅಂದೆ ರಾತ್ರಿ 8 ಗಂಟೆಗೆ ಅವರ್‌ನೆಲ್ಲಾ ಆರ್ಮಿ ವಾಹನಲಿ ಕೂರಿಸಿಕಂಡ್ ತಮಿಳುನಾಡಿನ ಎಂ.ಆರ್.ಸಿ. (ಮದ್ರಾಸ್ ರೆಜಿಮೆಂಟ್ ಸೆಂಟರ್) ಆರ್ಮಿ ಟ್ರೈನಿಂಗ್ ಸೆಂಟರ್ ವೆಲ್ಲಿಂಗ್‌ಟನ್‌ಗೆ ಕರ್‌ಕೊಂಡು ಹೋದೊ. ಅಲ್ಲಿ ತಮಿಳುನಾಡು, ಕೇರಳ, ಆಂದ್ರಪ್ರದೇಶ ಮತ್ತೆ ಕರ್ನಾಟಕದ ಇತರ ಜಿಲ್ಲೆಂದ ಸಾವಿರಾರ್ ಜನಗ ಬಂದಿದ್ದೊ. ಅಲ್ಲಿ ಓಡಿಕೆ ನೂರು ಜನರಂಗೆ ಒಂದೊಂದು ಗುಂಪು ಮಾಡಿದ್ದೊ. 1600 ಮೀಟರ್ ಓಟ ಓಡಿಸಿದೊ. ಗುಂಪ್‌ಲಿ ಅವು ಎಲ್ಲವುಕೆ ಮುಂಚೆ ತುಂಬಾ ಅಂತರಂದ ಮೊದಲು ಬಂದ್ ಸೇರ್‌ದೊ. ಅಲ್ಲಿ ಪುನ: ಎತ್ತರ, ತೂಕ, ಎದೆಯ ಸುತ್ತಳತೆ ಮತ್ತೆ ಸಣ್ಣಪುಟ್ಟ ಮೆಡಿಕಲ್, ಫಿಸಿಕಲ್

ಕೊನೆಗೆ ಲಿಖಿತ ಪರೀಕ್ಷೆ ಮಾಡ್ದೊ. ಎಲ್ಲಾ ಪರೀಕ್ಷೆಲಿ ಪಾಸ್ ಆದೊ. ಅಲ್ಲಿ ಸೆಲೆಕ್ಷನ್ ಆದ ಹೈದಂಗಳ ಟ್ರೈನಿಂಗ್ ಕ್ಯಾಂಪ್‌ಗೆ ಕಳ್‌ಸಿದೊ. ಹತ್ತು ತಿಂಗ ಟ್ರೈನಿಂಗ್ ನಡ್‌ತ್. ಟ್ರೈನಿಂಗ್ ಜೊತೆಗೆ ಸ್ಪೋರ್ಟ್ಸ್ ಕೂಡ ನಡಿತ್ತಿತ್. ಇವು ಸ್ಪೋರ್ಟ್ಸ್‌ಲಿ ಭಾಗವಹಿಸಿ ಹಲವಾರು ಇನಾಂ ಸಿಕ್ಕಿತ್. ಟ್ರೈನಿಂಗ್ ಮುಗ್‌ದಂಗೆ ಇವುಕೆ ಬೆಸ್ಟ್ ಸ್ಟುಡೆಂಟ್ ಅವಾರ್ಡ್ ಸಿಕ್ಕಿತ್. ಇದ್ ಮುನ್ನೂರು ಜನರ್‌ಲಿ ಮೂರು ಜನಕ್ಕೆ ಮಾತ್ರ ಈ ಅವಾರ್ಡ್.

1985 ನೇ ಇಸವಿಲಿ ಇವರ್‌ನ 7 ಮದ್ರಾಸ್ ಬೆಟಾಲಿಯನ್ ಜಮ್ಮುಗೆ ವರ್ಗಾವಣೆ ಮಾಡಿದೊ. ಇವರ ಜೊತೆಗೆ 15 ಮಕ್ಕ ಇದ್ದೊ. ಬೆಟಾಲಿಯನ್‌ಗೆ ಹೋದಂಗೆ ಪುನ: ಹೊಸ ಬಂದೂಕು, ಮದ್ದು ಗುಂಡುಗಳ ಬಗ್ಗೆ ಮೂರು ತಿಂಗ ಟ್ರೈನಿಂಗ್ ಮಾಡಿಸಿದೊ. ಆಮೇಲೆ ಅವರನೆಲ್ಲಾ ಕಂಪನಿಗೆ ಸೇರಿಸಿ ಕೊಂಡೊ. ಸ್ವಲ್ಪ ದಿನಗಳ ನಂತ್ರ ಇಂಟರ್ ಕಂಪನಿ ಕ್ರಾಸ್ ಕಂಟ್ರಿ ಓಟ (15 ಕಿ.ಮೀ.) ಸ್ಪರ್ಧೆ ನಡ್‌ತ್. ಇವು ಆ ಓಟಲಿ ಎಲ್ಲಾವುಕಿಂತ ತುಂಬ ಅಂತರಂದ ಮೊದಲ ಸ್ಥಾನ ಬಂದ್ 500 ರೂಪಾಯಿಯ ಇನಾಂ ಮತ್ತೆ ಮೆಡಲ್ ತಕಂಡೊ. ಹಂಗೆನೆ ಕೆಲವು ವಾರಗ ಕಳ್‌ದಂಗೆ ಪುನ: ಇಂಟರ್ ಕಂಪೆನಿ 5 ಕಿ.ಮೀ. BPET (Battle Physical Efficiency Test) ಸ್ಪರ್ಧೆ ಅಂದರೆ ಒಂದು ಬ್ಯಾಗ್‌ಲಿ ಸೊಳ್ಳೆಪರದೆ, ರೈನ್‌ಕೋಟ್, ಶೂ, ಸಾಕ್ಸ್, ಹಗ್ಗ, ಟಿಫಿನ್, ಒಂದು ಲೀಟರ್ ನೀರ್, ಸೋಪು, ಚಮಚ ಇನ್ನಿತರ ಸಾಮಾನುಗಳ ಜೊತೆಗೆ ಬಂದೂಕು ಹಿಡಿದ್‌ಕಂಡ್ ಓಡೊಕು. ಈ ಸ್ಪರ್ಧೆಲಿ ಕೂಡ ಇವು ಮೊದಲು ಬಂದೊ. ಅವರ ಕಂಪೆನಿ ಚಾಂಪಿಯನ್‌ಶಿಪ್ ಟ್ರೋಫಿನ ಪಡ್‌ಕಂಡೊ.

1988 ರಲ್ಲಿ ಇವರ ಬೆಟಾಲಿಯನ್ ಕಾಶ್ಮೀರದ ಕಾರ್ಗಿಲ್ ಮುಂದೆ ಬಟಾಲಿಕ್ ಪಾಕಿಸ್ತಾನ ಗಡಿಗೆ ವರ್ಗಾವಣೆ ಆತ್. ಅದ್ ದೊಡ್ಡ ದೊಡ್ಡ ಬೆಟ್ಟ ಗುಡ್ಡಗ, ಹಿಮ ಗಾಳಿ, ಫೋನ್ ಇಲ್ಲೆ, ಯಾವ ಜನ ಇಲ್ಲದ ಜಾಗ. ಅವು ಬರದ ಕಾಗದ ಮನೆ ಮುಟ್ಟಿಕೆ ಒಂದು ತಿಂಗಳ ಮೇಲೆ ಆಗ್‌ತ್ತಿತ್. ಹಂಗೆ ಎರಡುವರೆ ವರ್ಷ ಪಾಕಿಸ್ತಾನದ ಗಡಿ ಕಾದು ಇವರ ಬೆಟಾಲಿಯನ್ ದೆಹಲಿಯ ರಾಷ್ಟ್ರಪತಿ ಭವನಕ್ಕೆ ವರ್ಗಾವಣೆ ಆತ್. PBG (President Body Guard) ಆಗ ರಾಷ್ಟ್ರಪತಿ ಡಾ॥ ಶಂಕರ್ ದಯಾಳ್ ಶರ್ಮ ಆಗಿದ್ದೊ. ಅಲ್ಲಿ ಎಲ್ಲಾ ಆಟೋಟ ಸ್ಪರ್ಧೆನೂ ನಡಿತಿತ್. ಅಲ್ಲಿ ಇವು ಎಲ್ಲಾ ಪರೀಕ್ಷೆಗಳಲಿ ಪಾಸ್ ಮಾಡಿಕಂಡ್ ಸಮಯಕ್ಕೆ ಸರಿಯಾಗಿ ಪ್ರಮೋಷನ್ ತಗೊಂಡ್ PWI (Platoon Weapon Instructor) ಕೋರ್ಸ್ ಮುಗಿಸಿಕೊಂಡು ಹೊಸದಾಗಿ ಬಟಾಲಿಯನ್‌ಗೆ ಮಕ್ಕಳಿಗೆ ಟ್ರೈನಿಂಗ್ ಕೊಡುತ್ತಿದ್ದೊ. ಹಂಗೆನೆ ಮೂರು ವರ್ಷ ಮುಗಿಸಿ ಇವರ ಬೆಟಾಲಿಯನ್ ಸಿಕ್ಕಿಂ– ಚೀನಾ ಗಡಿಗೆ ವರ್ಗಾವಣೆ ಆತ್. ಅಲ್ಲಿ ಒಂದುವರೆ ವರ್ಷ ಮುಗ್‌ದಂಗೆ ಇಂಟರ್ ಬೆಟಾಲಿಯನ್ ರೀ ಯೂನಿಯನ್ ಕ್ರಾಸ್ ಕಂಟ್ರಿ (15 ಕಿ.ಮೀ) ಚಾಂಪಿಯನ್‌ಶಿಪ್ ಟ್ರೋಫಿ ಸ್ಪರ್ಧೆ ತಮಿಳುನಾಡಿನ ವೆಲ್ಲಿಂಗ್‌ಟನ್ ಟ್ರೈನಿಂಗ್ ಸೆಂಟರ್‌ನಲ್ಲಿ ನಡೆಸಿತ್. ಆ ಸ್ಪರ್ಧೆಲಿ ಹದಿನೆಂಟು ಬೆಟಾಲಿಯನ್‌ಂದ ಹದಿನೇಳು

ಜನರಂಗೆ 306 ಜನ ಸ್ಪರ್ಧೆಲಿ ಭಾಗವಹಿಸಿದ್ದೊ. ಆ ಸ್ಪರ್ಧೆಲಿ ಇವು ಪ್ರಥಮ ಸ್ಥಾನ ಮತ್ತೆ ನಮ್ಮ ಬೆಟಾಲಿಯನ್ ಓವರ್ ಆಲ್ ಚಾಂಪಿಯನ್‌ಶಿಪ್ ಟ್ರೋಫಿನ ಗೆದ್ದು ಹೊಸ ದಾಖಲೆ ಮಾಡ್‌ದೊ. 1995ನೇ ಇಸವಿ ಡಿಸೆಂಬರ್ ತಿಂಗ ಇವು ಎಂ.ಆರ್.ಸಿ. ಸ್ಪೋರ್ಟ್ಸ್ ಕಂಪೆನಿಗೆ ಸೇರಿಸಿಕೊಂಡೊ. 1997 ರಲ್ಲಿ ಇವು ಕೋಚ್ ಸುಭೇದಾರ್ ಕೆ.ವಿ. ರಾಜನ್ ರವರ ಮ್ಯಾರಥಾನ್ ತರಬೇತಿ ಪಡ್‌ದ ನ್ಯಾಶನಲ್ ಮ್ಯಾರಥಾನ್ ಕೊಯಮತ್ತೂರ್‌ಲಿ ಭಾಗವಹಿಸಿ ಕಂಚಿನ ಪದಕಕ್ಕೆ ತೃಪ್ತಿ ಪಡ್ದೊ. ಇವರ ಕೋಚ್ ಕೆ.ವಿ ರಾಜನ್ ಇಂಟರ್ ನ್ಯಾಶನಲ್ ಗೋಲ್ಡ್ ಮೆಡಲಿಸ್ಟ್ ಕೂಡ ಆಗಿದ್ದೊ.

ಇವು 1999ರ ಮೇ ತಿಂಗ ಸಿಂಗತ್ತೂರು ಗ್ರಾಮ ಚೆಟ್ಟಿಮಾನಿಯ ಕುದುಪಜೆ ಹಿರಣಯ್ಯ ಮತ್ತೆ ಶ್ರೀಮತಿ ಅಮರಾವತಿ ದಂಪತಿಗಳ ಪುತ್ರಿ ಗಾಯನ (ಮೈನಾ)ಳನ್ನ ಮದ್ವೆ ಆದೊ. 2000ನೇ ಇಸವಿಲಿ ವಿಶ್ವ ಕ್ರಾಸ್‌ಕಂಟ್ರಿ ಚಾಂಪಿಯನ್‌ಶಿಪ್ ಸ್ಪರ್ಧೆಲಿ ಭಾಗವಹಿಸಿದೊ. ಇದೇ ಅವದಿಲಿ ಇವು ಜೂನಿಯರ್ ಕಮಿಷನರ್ ಆಫೀಸರ್ (ಜೆಸಿಒ) ಆಗಿ ಪ್ರಮೋಷನ್ ಪಡ್ದೊ. 2001ನೇ ಡಿಸೆಂಬರ್ 25ನೇ ತಾರೀಕಿಗೆ ಚೆಸಾಂಕ್ ಎಂಬ ಗಂಡು ಕೂಸಿಗೆ ಅಪ್ಪ ಆದೊ. 2005 ರಲ್ಲಿ ಸುಭೇಧರ್ ಆಗಿ ಪ್ರಮೋಷನ್ ಪಡ್ದೊ. 2010 ರಂದು ಕಾಶ್ಮೀರದ ಪೂಂಚ್ ಸೆಕ್ಟರ್ ಪಾಕಿಸ್ತಾನದ ಗಡಿಗೆ ವರ್ಗಾವಣೆ ಆಗಿ. ಅಲ್ಲಿ ಸೀನಿಯರ್ ಜೆ.ಸಿ.ಒ. ಮತ್ತೆ ಕಂಪೆನಿ ಕಮಾಂಡರ್ ಆಗಿ ಕಾರ್ಯ ನಿರ್ವಹಿಸಿ 2012 ನೇ ಇಸವಿಗೆ ಸುಬೇದಾರ್ ಮೇಜರ್ ಪ್ರಮೋಷನ್ ಆಗಿ ಮಧ್ಯಪ್ರದೇಶದ ಸಾಗರ್ ಎಂಬಲ್ಲಿ ಬ್ರಿಗೇಡ್ ಸುಭೇದಾರ್ ಮೇಜರ್ ಆಗಿ ಕಾರ್ಯ ನಿರ್ವಹಿಸಿ 2014ನೇ ಇಸವಿಲಿ 14 ಕರ್ನಾಟಕ ಬೆಟಾಲಿಯನ್ ಎನ್.ಸಿ.ಸಿ. ಮೈಸೂರಿಗೆ ವರ್ಗಾವಣೆಯಾಗಿ ಸುಭೇದಾರ್ ಮೇಜರ್ ಕಾರ್ಯ ನಿರ್ವಹಿಸಿದೊ. 2015ನೇ ಇಸವಿಗೆ ಇವುಕೆ ಹಾ॥ ಲೆಫ್ಟಿನೆಂಟ್ ಆಗಿ ಪ್ರಮೋಷನ್ ಆತ್. ಪುನ: 2016ನೇ ಜನವರಿಲಿ ಹಾ॥ ಕ್ಯಾಪ್ಟನ್ ಆಗಿ ಪ್ರಮೋಷನ್ ಆತ್. ಇವುಕೆ ಸೇನೆಲಿ ಎರಡ್ ಸಲ COAS (Chief of the Army Staff) ಅವಾರ್ಡ್, ಮೆಡಲ್ ಮತ್ತೆ ಸರ್ಟಿಫಿಕೇಟ್ ಸಿಕ್ಕಿತ್.

2016 ಮಾರ್ಚ್ 31ನೇ ತಾರೀಕಿಗೆ ಸೇನೆಯಿಂದ ನಿವೃತ್ತರಾದೊ. ಇವರ ಜೊತೆ ಸ್ಪೋರ್ಟ್ಸ್‌ಲಿ ಕೊಡಗಿನವರಾದ ನಾಣಯ್ಯ, ಅಯ್ಯಣ್ಣ, ಗುರುಪ್ರಸಾದ್, ತಿಮ್ಮಯ್ಯ, ಪೂಣಚ್ಚ, ರಂಜನ್, ಚಿದುಕುಮಾರ್ ಮತ್ತೆ ಶಿಷ್ಯ ಕೊಂಬಾಳೆ ಅನಂತಕುಮಾರ್ (ಅರುಣ್) ಇದ್ದೊ. ಅನಂತಕುಮಾರ್ ಇಂಟರ್‌ನ್ಯಾಶನಲ್ ಅಥ್ಲೆಟಿಕ್ಸ್‌ಲಿ ಚಿನ್ನದ ಪದಕ ತಕಂಡ್ ಈಗ ಸುಭೇದಾರ್ ಮೇಜರ್ ಆಗಿ ಕಾಶ್ಮೀರಲಿ ಕಾರ್ಯ ನಿರ್ವಹಿಸುತ್ತಾ ಒಳೊ.

ಇವು ಕ್ರಾಸ್ ಕಂಟ್ರಿ ಮತ್ತೆ ಮ್ಯಾರಥಾನ್‌ಲಿ ಭಾಗವಹಿಸಿದ ರಾಜ್ಯಗ– ಕರ್ನಾಟಕ, ತಮಿಳುನಾಡು, ಕೇರಳ, ಆಂದ್ರಪ್ರದೇಶ, ಮಹರಾಷ್ಟ್ರ, ತೆಲಂಗಾಣ, ಉತ್ತರಾಕಾಂಡ್, ಪಂಜಾಬ್, ಮಧ್ಯಪ್ರದೇಶ, ಉತ್ತರಪ್ರದೇಶ, ಪಶ್ಚಿಮ ಬಂಗಾಳ, ಸಿಕ್ಕಿಂ, ಅರುಣಾಚಲ ಪ್ರದೇಶ, ಹರಿಯಾಣ, ದೆಹಲಿ, ಜಮ್ಮು ಕಾಶ್ಮೀರ, ಗುಜರಾತ್,

ಜಾರ್ಖಂಡ್, ವಿದೇಶಕ್ಕೆ ಹೋದ ರಾಷ್ಟ್ರಗಳು– ಪೋರ್ಚುಗಲ್ (2 ಬಾರಿ), ಸಿಂಗಾಪುರ (2 ಬಾರಿ), ಶ್ರೀಲಂಕ, ಮಲೇಷಿಯ, ಹಾಂಗ್‌ಕಾಂಗ್, ಅಬುದಾಬಿ, ಲೆಬನಾನ್, ರಷ್ಯಾ, ಫ್ರಾನ್ಸ್, ಗ್ರೀಸ್, ಥೈಲ್ಯಾಂಡ್ ಮೊದಲಾದವು. ಕ್ಯಾಪ್ಟನ್ ಹೊಸೊಕ್ಲು ಚಿಣ್ಣಪ್ಪ ಮಾಜಿ ಸೈನಿಕ ಮತ್ತೆ ಕೃಷಿಕನಾಗಿ ಮಡಿಕೇರಿ ತಾಲ್ಲೂಕು ಮರಗೋಡು ಗ್ರಾಮಲಿ ನೆಮ್ಮದಿಯ ಜೀವನ ನಡೆಸ್‌ತೊಳೊ. ಭಗವಂತ ಇವುಕೆ ಒಳ್ಳೆಯ ಆರೋಗ್ಯ ಐಶ್ವರ್ಯ ನೀಡಿ ಕರುಣಿಸಲಿ ಅಂತ ಹಾರೈಸೋಣ.

**ಇವು ಮಾಡಿದ ಕ್ರೀಡಾ ಸಾಧನೆಗ ಮತ್ತೆ ಪಡ್‌ದ ಪದಕಗ**

| ಕ್ರ. ಸಂ. | ವಿವರಗ | ಪದಕಗಳು ಚಿನ್ನ | ಬೆಳ್ಳಿ | ಕಂಚು |
|---|---|---|---|---|
| 1 | ಕಮಾಂಡ್ ಕ್ರಾಸ್ ಕಂಟ್ರಿ ಮತ್ತು ಮಾರಥಾನ್ | 2 | – | – |
| 2 | ಆರ್ಮಿ ಕ್ರಾಸ್ ಕಂಟ್ರಿ ಮತ್ತು ಮಾರಥಾನ್ | 11 | 3 | 1 |
| 3 | ಸರ್ವಿಸಸ್ ಕ್ರಾಸ್ ಕಂಟ್ರಿ ಮತ್ತು ಮಾರಥಾನ್ | 10 | 3 | 3 |
| 4 | ನ್ಯಾಷನಲ್ ಕ್ರಾಸ್ ಕಂಟ್ರಿ ಮತ್ತು ಮಾರಥಾನ್ | 10 | 3 | 2 |
| 5 | ನ್ಯಾಷನಲ್ ಇಂದಿರಾ ಮಾರಥಾನ್ ಅಲಹಾಬಾದ್ | 1 | 2 | 2 |
| 6 | ನ್ಯಾಷನಲ್ ಅಂಬೇಡ್ಕರ್ ಮಾರಥಾನ್, ಲಕ್ನೋ | 1 | – | – |
| 7 | ನ್ಯಾಷನಲ್ ಓಣಂ ಮಾರಥಾನ್ ಕೇರಳ | 1 | – | – |
| 8 | ನ್ಯಾಷನಲ್ ಓಪನ್ ದಸರಾ ಮಾರಥಾನ್ ಕರ್ನಾಟಕ | 1 | – | – |
| 9 | ನ್ಯಾಷನಲ್ ನೋಯ್ಡಾ ಮಾರಥಾನ್, ಹರಿಯಾಣ | 1 | – | – |
| 10 | ನ್ಯಾಷನಲ್ ಮಂಗಳ ಮಾರಥಾನ್, ಕರ್ನಾಟಕ | 1 | – | – |
| 11 | ನ್ಯಾಷನಲ್ ಟ್ರಾವಂಕೂರ್ ಮಾರಥಾನ್, ಕೇರಳ | 2 | 2 | 1 |
| 12 | ನ್ಯಾಷನಲ್ ವರ್ಷಾ ಮಾರಥಾನ್, ಮಹರಾಷ್ಟ್ರ | 1 | 1 | – |
| 13 | ನ್ಯಾಷನಲ್ ಟೈಗರ್ ಮಾರಥಾನ್, ಜಮ್ಮುಕಾಶ್ಮೀರ | 1 | – | – |
| 14 | ಕೊಡಗು ಕಾವೇರಿ ಮಾರಥಾನ್, ಕರ್ನಾಟಕ | 5 | – | – |
| 15 | ನ್ಯಾಷನಲ್ ಗುರುಚರಣ್ ಮಾರಥಾನ್, ಉತ್ತರಪ್ರದೇಶ | – | 1 | – |
| 16 | ನ್ಯಾಷನಲ್ ಸರ್ವೋ ಮಾರಥಾನ್, ಪಂಜಾಬ್ | – | 1 | – |
| 17 | ನ್ಯಾಷನಲ್ ಕೋವೈ ಮಾರಥಾನ್, ತಮಿಳುನಾಡು | – | – | 1 |
| 18 | ನ್ಯಾಷನಲ್ ಟೈಮ್ಸ್ ಮಾರಥಾನ್, ಆಂದ್ರಪ್ರದೇಶ | – | 1 | – |
| 19 | ನ್ಯಾಷನಲ್ ಮವಾನ ಮಾರಥಾನ್, ನವದೆಹಲಿ | – | – | 1 |
| 20 | ಸ್ಟೇಟ್ ಮಾಸ್ಟರ್ಸ್ ಅಥ್ಲೆಟಿಕ್ಸ್, ಬೆಂಗಳೂರು | 6 | 1 | – |
| 21 | ನ್ಯಾಷನಲ್ ಮಾಸ್ಟರ್ಸ್ ಅಥ್ಲೆಟಿಕ್ಸ್ ಚಾಂಪಿಯನ್‌ಶಿಪ್ ತೆಲಂಗಾಣ | 7 | 2 | – |
| 22 | ನ್ಯಾಷನಲ್ ಚೆನ್ನೈ ಮಾರಥಾನ್, ತಮಿಳುನಾಡು | – | – | 1 |
| 23 | ಇಂಟರ್ ನ್ಯಾಷನಲ್ ಮಾರಥಾನ್, ಬೆಂಗಳೂರು | 1 | – | – |
| 24 | ಇಂಟರ್ ನ್ಯಾಷನಲ್ ಎಸ್.ಬಿ.ಟಿ. ಮಾರಥಾನ್, ಕೇರಳ | – | 1 | – |
| 25 | ಇಂಟ್ ನ್ಯಾಷನಲ್ ಚೆರಿಕ್ಟರೇಟ್ ಮಾರಥಾನ್, ಮುಂಬೈ | – | 1 | – |
| 26 | ಇಂಟರ್ ನ್ಯಾಷನಲ್ ಹೆಚ್ ಮಾರಥಾನ್, ಪುಣೆ | – | – | 1 |
| | ಒಟ್ಟು | 70 | 22 | 13 |

✍ ದೇವಿಪ್ರಸಾದ್ ಅಮೆಮನೆ

ಯುವ ಪ್ರತಿಭೆ

# ಯುವ ವಿಜ್ಞಾನಿ– ಡಾ॥ ಹರ್ಷಿತಾ ಅಯ್ಯಪ್ಪ ಬಾರಿಕೆ



ಇವು ಭಾಗಮಂಡಲ ನಾಡು ತಾವೂರು ಗ್ರಾಮದ ಬಾರಿಕೆ ರತ್ನಶೀಲಾ ಮತ್ತೆ ಅಯ್ಯಪ್ಪ ದಂಪತಿಗಳ ಮೊದಲ ಮಗಳು. ಈಗ ಇವು ಮಡಿಕೇರಿಯ ಕಾವೇರಿ ಬಡಾವಣೆಲಿ ವಾಸ ಒಳೊ. ಹರ್ಷಿತಾ ಒಂದು ವರ್ಷದ ಕೂಸಿನಿಂದಲೇ ಇಲ್ಲಿನ 'ಕಲ್ಪಿತ' ಶಿಶುಪಾಲನೆ ಕೇಂದ್ರಲಿ ತನ್ನ ಜೀವನದ ಮೊದಲ ಹಂತನ ಪ್ರವೇಶಿಸಿ ಶಿಸ್ತುಬದ್ಧ ಮತ್ತೆ ಒಳ್ಳೆ ಸಂಸ್ಕಾರ ಕಲ್‌ತ್‌ಕೊಂಡೊ.

ಸಣ್ಣದರಿಂದಲೇ ಮೌನಿ ಮತ್ತೆ ಬುದ್ಧಿವಂತೆಯಾದ ಇವಳನ್ನ ಯಾರು ಗುರುತಿಸಿಕೊಂಡಿತ್‌ಲೆ. ಇವು ವಿದ್ಯಾಭ್ಯಾಸನ ಮಡಿಕೇರಿಯ ಸಂತ ಜೋಸೆಫ್ ಶಾಲೆಲಿ ಎಲ್.ಕೆ.ಜಿ. ಯಿಂದ 10ನೇ ತರಗತಿ ಮುಟ್ಟ ಓದಿ ಶೇ. 94 ಅಂಕ ಪಡ್ದ್ ಪಾಸಾದೊ. ಮುಂದೆ ಇದೇ ಸ್ಕೂಲ್‌ಲಿ ಹೊಸದಾಗಿ ಶುರು ಆದ ಪದವಿ ಪೂರ್ವ ಮಹಿಳಾ ಕಾಲೇಜಿನ ಸೈನ್ಸ್ ವಿಭಾಗಲಿ ಅತ್ಯುನ್ನತ ಶ್ರೇಣಿಲಿ ಪಾಸಾಗಿ ಕೊಡಗಿಗೆ ಎರಡನೆಯವಳಾಗಿ ಬಂದೊ. ಜೂನಿಯರ್ ಸಂಗೀತ ಅಭ್ಯಾಸ ಮಾಡಿ ಇಸ್ಕೂಲು ಮತ್ತೆ ಬೇರೆ ಕಡೆ ನಡೆಯುವ ಸ್ಪರ್ಧೆಗಳ್‌ಲಿ ಬಹುಮಾನ ತಕಂಡ್ ಉತ್ತಮ ಹಾಡುಗಾರ್ತಿಂತೇಳಿ ತೋರಿಸಿಕೊಟ್ಟೊ.

ಮುಂದೆ ಮೂಡುಬಿದ್ರೆ ಆಳ್ವಾಸ್ ಕಾಲೇಜ್‌ಲಿ ಬಿ.ಎಸ್ಸಿ. ಪದವಿನ ಮಂಗಳೂರು ವಿಶ್ವವಿದ್ಯಾನಿಲಯಕ್ಕೆ ಮೂರನೆ ರ್‍ಯಾಂಕಿನೊಂದಿಗೆ ಮುಗಿಸಿದೊ. ಅಲ್ಲಿಂದ ಸೂರತ್ಕಲ್‌ನಲ್ಲಿ ಎಂ.ಎಸ್ಸಿ. ರಾಸಾಯನ ಶಾಸ್ತ್ರ ವಿಭಾಗದಲ್ಲಿ ಓದಿ ಮೊದಲನೆ ರ್‍ಯಾಂಕ್ ಗಳಿಸಿಕೊಂಡೊ. ಅದೇ ವರ್ಷ ನಡ್‌ದ ರಾಷ್ಟ್ರೀಯ ಸಿ.ಎಸ್.ಐ.ಆರ್. ಪರೀಕ್ಷೆಲಿ 82ನೇ ಸ್ಥಾನ ಗಳಿಸಿಕಂಡ್ ಪುಣೆಯ ರಾಷ್ಟ್ರೀಯ ರಾಸಾಯನಿಕ ಪ್ರಯೋಗಾಲಯಲಿ ಪಿ.ಹೆಚ್.ಡಿ. ಪದವಿನೂ ಮಾಡ್ದೊ. ಸತತ ಪ್ರಯೋಗಗಳ್‌ನ ಮಾಡಿ ಕನಿಷ್ಟ ಐದ್ ವರ್ಷಗಳಲ್ಲೆ ರಾಸಾಯನಿಕಕ್ಕೆ (Electro Chemistry) ಸಂಬಂಧಿಸಿದ ಪಿ.ಹೆಚ್.ಡಿ. ಪದವಿ ಗಳಿಸಿಕೊಂಡೊ. ತಕ್ಷಣ ಜರ್ಮನಿಯ ರೂರ್ಹ್ ವಿಶ್ವವಿದ್ಯಾನಿಲಯಲಿ Post doctoral ಪದವಿಗೆ ಆಯ್ಕೆ ಆಗಿ ಜರ್ಮನಿಯ 'Hombolt ಪ್ರತಿಷ್ಠಿತ ಫೆಲೋಶಿಪ್‌ನ ಕೂಡ ಪಡಕಂಡ್, ಅಲ್ಲಿಯೇ ಎರಡು Post doc ಪದವಿಯನ್ನ ಗಳಿಸಿಕಂಡ್ ಭಾರತಲಿ ಸೇವೆ ಮಾಡುಕುತ ಹೇಳಿ ಹರ್ಯಾಣದ ಗುರುಗಾಂವ್‌ನ ಜರ್ಮನಿಯ ಬಹುರಾಷ್ಟ್ರೀಯ

Autotech ಕಂಪನಿಲಿ ವಿಜ್ಞಾನಿಯಾಗಿ ಕೆಲಸ ನಿಯೋಜನೆ ಆಗುಟ್ಟು. ಇದೇ ಅಕ್ಟೋಬರ್ 20 ರಿಂದ ಕಾರ್ಯ ಸುರು ಮಾಡಿವೆ.

ಪಿ.ಹೆಚ್.ಡಿ. ಆದ ಮೇಲೆ PDF ಸಾಧನೆಗೆ ಅವಳ ಪತಿ ಡಾ॥ ಸುಭದೀಪ್ ಸಹಾ ರವರ ಸಹಕಾರ ಮತ್ತೆ ಉತ್ತೇಜನಂದ ಸಾಧ್ಯ ಆತ್.

ಹಿಂಗೆ ಕೊಡಗ್‌ಲಿ ಹುಟ್ಟಿ ಇಲ್ಲಿಯೇ ವಿದ್ಯಾಭ್ಯಾಸ ಮಾಡಿ ಸತತ ಪ್ರಯತ್ನಂದ ಯಾವುದೇ ಕ್ಷೇತ್ರಲಿ ಮುಂದೆ ಬಾಕೆ ಸಾಧ್ಯ ಉಟ್ಟುತ ಇವು ತೋರಿಸಿಕೊಟ್ಟೊಳೊ.

**ಸಂಗ್ರಹ : ಚೊಕ್ಕಾಡಿ ಪ್ರೇಮ ರಾಘವಯ್ಯ**

* * * * * *

## ಎಸ್.ಎಸ್.ಎಲ್.ಸಿ. ಪರೀಕ್ಷೆಲಿ ರಾಜ್ಯಕ್ಕೆ ಒಂದನೆ ಸ್ಥಾನ



ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಮಂಡಳಿ 2020ಲಿ ನಡ್ಸಿದ ಎಸ್.ಎಸ್.ಎಲ್.ಸಿ. ಪರೀಕ್ಷೆಲಿ 625/625 ಮಾರ್ಕ್ಸ್ ಪಡ್ದ್ ರಾಜ್ಯಕ್ಕೆ ಪ್ರಥಮ ಸ್ಥಾನಲಿ ತೇರ್ಗಡೆ ಆದ ಅನುಷ್ ಎ.ಎಲ್. ದಕ್ಷಿಣ ಕನ್ನಡ ಜಿಲ್ಲೆ ಕುಕ್ಕೆ ಸುಬ್ರಹ್ಮಣ್ಯದ ಕುಮಾರಸ್ವಾಮಿ ಸಾಲೆನ ವಿದ್ಯಾರ್ಥಿ. ಮೆಸ್ಕಾಂ ಇಂಜಿನಿಯರ್ ಶ್ರೀ ಎ. ಲೋಕೇಶ್ ಮತ್ತೆ ಶ್ರೀಮತಿ ಉಷಾ ದಂಪತಿಗಳ ಮಂಙ. ಹಳ್ಳಿ ಪರಿಸರಲಿ ವಿದ್ಯೆ ಕಲ್ತ್ ಅನುಷ್‌ನ ಸಾಧನೆ ಒಂದು ಚಾರಿತ್ರಿಕ ದಾಖಲೆಂತ ಹೇಳ್ರೆ ತಪ್ಪಲ್ಲ. ಅನುಷ್ ಪರಿಸರ ಪ್ರೇಮಿ. ಮುಂದೆ ಐ.ಎಫ್.ಎಸ್. ಮಾಡಿ ಅರಣ್ಯ ಅಧಿಕಾರಿ ಆಕ್ಕುಂತ ಅಂವನ ಅಪೇಕ್ಷೆ. ನಿಯಮಿತ ಅಭ್ಯಾಸ, ಶಿಕ್ಷಕರ ಮಾರ್ಗದರ್ಶನ ಮತ್ತೆ ಹೆತ್ತವರ ಪ್ರೋತ್ಸಾಹಂದ ಈ ಸಾಧನೆ ಫಲಕಾರಿ ಆತ್‌ಂತ ಅನುಷ್ ಅಭಿಪ್ರಾಯಪಟ್ಟದೆ. ಓದು, ಡ್ರಾಯಿಂಗ್, ವಿಜ್ಞಾನ ವಸ್ತುಗಳ ತಯಾರಿ ಇಂವನ ಹವ್ಯಾಸಗ.

ಬುಡದೆ ಮೂರು ವರ್ಸ ಮಣಿಪಾಲ ಯೂನಿವರ್ಸಿಟಿ ನಡ್ಸಿದ ವಿಜ್ಞಾನ ಮೇಳಕ್ಕೆ ಆಯ್ಕೆ ಆವುಟು. ತಮ್ಮ ಆಕಾಶ್ ಎ.ಎಲ್. 6ನೇ ಕ್ಲಾಸ್‌ಲಿ ಕಲಿತಾವುಟ್ಟು.

ಅನುಷ್‌ನ ಭವಿಷ್ಯ ಉಜ್ವಲ ಆಗಿ ದೇಸಕ್ಕೆ ಒಳ್ಳೆ ಕೊಡುಗೆ ನೀಡುವ ದಿಕ್ಕ್‌ಲಿ ಪ್ರಯತ್ನಿಸಿ ಜಯಗಳ್ಸಲಿಂತ ಹತ್ತ್ ಕುಟುಂಬ ಹದಿನೆಂಟ್ ಗೋತ್ರದ ಸಮಾಜ ಬಾಂದವು ಆಶೀರ್ವಾದ ಮಾಡ್ವೆ.

**✍ ಕುಂಞೇಟಿ ಶಿವರಾಮಗೌಡ**

ಸಾಧಕರ ಪರಿಚಯ

# ಕೆ.ವಿ. ಗೌಡ್ರ ವಿಶೇಸ ಅಂಚೆ ಲಕೋಟೆ ಬಿಡುಗಡೆ

ಈ ಸರ್ತಿ ಅಂಚೆ ಇಲಾಖೆ ಪ್ರಸಿದ್ದ ಕೂಜುಗೋಡು ಕಟ್ಟೆಮನೆ ದಿ॥ ವೆಂಕಟ್ರಮಣ ಗೌಡ್ರ ಸ್ಮರಣಾರ್ತ ಅಂಚೆ ಲಕೋಟೆನ ಪುತ್ತೂರು ಮುಖ್ಯ ಅಂಚೆ ಕಛೇರಿ ಬಿಡುಗಡೆ ಮಾಡಿಟು.

ನ್ಯಾಯವಾದಿ ಆಗಿ ಪುತ್ತೂರ್ಲಿ ಕೆಲ್ಸ ಮಾಡ್ತಿದ್ದ ಅವು ಒಬ್ಬ ಸೌಮ್ಯ ಮತ್ತೆ ಸದ್ಗುಣದ ವ್ಯಕ್ತಿ. ಸಮಾಜದ ಮುಂದಾಳಾಗಿದ್ದ ಕೆ.ವಿ. ಗೌಡ್ರು ಶ್ರೇಷ್ಟ ರಾಜಕೀಯ ಮುತ್ಸದ್ದಿಯಾಗಿ ಹೆಸ್ರ್ ಮಾಡಿದ್ದೊ.




ಅವರ 115 ನೇ ಜನ್ಮ ದಿನದ ಸಂದರ್ಭ ಅಂಚೆ ಲಕೋಟೆ ಬಿಡುಗಡೆ ಆದ್ ಎಲ್ಲವುಕೂ ಬಾರಿ ಸಂತೋಸದ ಸುದ್ದಿ. ಸಾಮಾಜಿಕ ಮುಂದಾ ಳಾಗಿದ್ದ ವೆಂಕಟ್ರಮಣ ಗೌಡ್ರು (ಸುಳ್ಯ, ಬೆಳ್ತಂಗಡಿ, ಪುತ್ತೂರು) ಪುತ್ತೂರು ವಿಧಾನಸಭಾ ಕ್ಷೇತ್ರದ ಸುರುನ ಶಾಸಕರಾಗಿ 1952 ರಲ್ಲಿ ಸ್ವತಂತ್ರ ಭಾರತದ ಸುರುನ ಚುನಾವಣೆಲಿ ಗೆದ್ದ್ ಮದ್ರಾಸ್ ವಿಧಾನಸಭೆ ಸದಸ್ಯರಾಗಿ ಆಯ್ಕೆ ಆದೊ. ಇದೇ ಪುತ್ತೂರು ಕ್ಷೇತ್ರಂದ 1957 ಮತ್ತೆ 1963 ರಲ್ಲಿ ಚುನಾವಣೆಲಿ ಗೆದ್ದ್ ಎರ್ಡ್ ಸರ್ತಿ ಮೈಸೂರು ವಿಧಾನಸಭೆ ಸದಸ್ಯರಾಗಿ ಆರ್ಸಿ ಬಂದೊ.

ಅಂಚೆ ಲಕೋಟೆಲಿ ವೆಂಕಟ್ರಮಣ ಗೌಡ್ರ ಪೋಟೊದ ಒಟ್ಟಿಗೆ, ಕಳ್ದ ವರ್ಸ ಅನಾವರಣ ಆದ ಅವರ ಪ್ರತಿಮೆನ ಚಿತ್ರ ಕೂಡ ವುಟ್ಟು. ಇವರ ಮುತ್ಸದ್ದಿತನ ಮತ್ತು ಸಮಾಜ ಸೇವೆ ಸಲ್ಲಿಸಿದ ಬಗ್ಗೆ ಹಿಂದಿ ಮತ್ತೆ ಇಂಗ್ಲೀಸ್‌ಲಿ ಅಚ್ಚಿ ಮಾಡ್ಯೊಳೊ.

ಕೂಜುಗೋಡು ಮನೆತನದ ಹಿರಿಯೊವು 1837 ರಲ್ಲಿ ಇಂಗ್ಲಿಸರ ಎದ್ರ್ ಸುಳ್ಯ ಮತ್ತೆ ಕೊಡ್ಗ್‌ನ ರೈತರ ಸ್ವಾತಂತ್ರ ಹೋರಾಟಲಿ ಪ್ರಮುಕರಾಗಿ ಭಾಗವಹಿಸಿರುವ ಬಗ್ಗೆ ಚಾರಿತ್ರ ದಾಕಲೆ ವುಟ್ಟು. ಹತ್ತ್ ಕುಟುಂಬ ಹದಿನೆಂಟ್ ಗೋತ್ರಲಿ ಒಬ್ಬ ಗಣ್ಯ ವ್ಯಕ್ತಿನ ಗುರ್ತಿಸಿ ಅಂಚೆ ಇಲಾಖೆ ಲಕೋಟೆ ಹೊರ ತಂದಿರುದು ಸುರುದ್‌ಂತ ಹೇಳಿಕೆ ನಾವ್ಗೆ ಬಾರಿ ಹೆಮ್ಮೆ ಆದೆ.

✍ ಕುಂಞೇಟಿ ಶಿವರಾಮಗೌಡ

(ಅನುಭವ)

# ಸಮಗ್ರ ಕೃಷಿಂದ ರೈತ ನೆಮ್ಮದಿಲಿ ಬದ್‌ಕಕ್



ರಾಜ್ಯ ಸರ್ಕಾರ ನನ್ನ ಸಮಗ್ರ ಕೃಷಿ ಚಟುವಟಿಕೆಗಳ್‌ನ ನೋಡಿ 'ಕೃಷಿ ಪಂಡಿತ ಪ್ರಶಸ್ತಿ'ನ ಕೊಟ್ಟ್ ನನ್ನನ್ನ ಗೌರವಿಸಿಯೊಳೊ. ನಾನ್ ನನ್ನ ಕೃಷಿ ಅನುಭವನ ನನ್ನ ಎಲ್ಲಾ ಜನಾಂಗ ಬಾಂದವುಕೆ ಹಂಚಿಕಣಿಕೆ ಇಷ್ಟ ಪಟ್ಟನೆ.

ನಾನ್ ಮಾಡ್‌ತಾ ಇರುವ ಕೃಷಿ ಚಟುವಟಿಕೆಗ – ಭತ್ತ, ಕಾಫಿ, ಏಲಕ್ಕಿ, ಅಡಿಕೆ, ಕರಿಮೆಣ್‌ಸ್, ಬಾಳೆ, ತೆಂಗು, ಹೈನುಗಾರಿಕೆ, ಮೀನು ಸಾಕಾಣಿಕೆ, ಕೋಳಿ– ಬಾತುಕೋಳಿ ಸಾಕಾಣಿಕೆ, ಹಂದಿ ಸಾಕಾಣಿಕೆ, ಕುರಿ ಸಾಕಾಣಿಕೆ, ಜೇನು ಸಾಕಾಣಿಕೆ, ಹಣ್ಣ್ ಮತ್ತೆ ತರಕಾರಿಗಳ್‌ನ ಬೆಳೆಸುದು.

ಭತ್ತದ ಕೃಷಿಲಿ ಮುಖ್ಯವಾಗಿ ಬಿ.ಕೆ.ಬಿ., ಬೆಳಿಯ, ಕರ್ತ, ಬಾಸುಮತಿ, ಹೇಮಾವತಿ, ತುಂಗಾ, ಅಧಿರ, ಐ.ಆರ್.64, ಹಿಂಗೆ ಹಲವಾರ್ ತಳಿಗಳ್‌ನ ಬೆಳ್ದೊಳೆ. ಅದರ್‌ಲಿ ನನ್ನ ಜಾಗಕ್ಕೆ ಮತ್ತೆ ನಮಿಗೆ ಊಟಕ್ಕೆ ತುಂಬಾ ಲಾಯ್ಕಾದ ಬೆಳೆ ಬಿ.ಕೆ.ಬಿ.ತ ನಂಗೆ ಅನಿಸಿಟು. ಯಾಕೆತ ಹೇಳ್‌ರೆ ಇದ್ ಎತ್ತರ ಬೆಳೆಯುವ ಬೆಳೆ. ದನಗನೂ ಲಾಯ್ಕ ಹುಲ್ಲು ತಿಂದವೆ. ನಾನ್ ಭತ್ತನ ಸಾವಯವ ಕೃಷಿಂದಲೇ ಬೆಳೆಯೊದು. ಇದರ್‌ಂದ ಮಣ್ಣ್‌ನ ಫಲವತ್ತತೆನೂ ಹೆಚ್ಚಿದೆ ಹಂಗೆ ಆರೋಗ್ಯನೂ ವೃದ್ದ್‌ಸಿದೆ.

ನಮ್ಮ ದೇಶಲಿ ಹೆಚ್ಚಾಗಿ ಕಾಫಿ ಬೆಳೆಯುವ ಜಿಲ್ಲೆ ಕೊಡಗ್, ನಾನ್ ರೋಬಸ್ಟ ಮತ್ತೆ ಅರೆಬಿಕಾ ಜಾತಿನ ಕಾಫಿ ಬೆಳಿತಾ ಒಳೆ. ರೋಬಸ್ಟಾಲಿ 274 ಸೆಲೆಕ್ಷನ್ ಮತ್ತೆ ಓಲ್ಡ್ ಪೆರೇಡಿಯನ್ ವೆರೈಟಿ, ಅರೆಬಿಕಾಲಿ ಚಂದ್ರಗಿರಿ, ಸಾಚಿಮೋರ್, ಕಟುವಾಯಿ ಈ ಮೂರು ಜಾತಿನ ಕಾಫಿ ತಳಿ ಬೆಳಿತಾ ಒಳೆ. ರೋಬಸ್ಟ, ಅರೆಬಿಕಾ ಎರ್‌ಡ್‌ನ ಜೊತೆಲಿ ಬೆಳಿತಾ ಒಳೆ. ಈ ವೆರೈಟಿಲಿ ಇಳುವರಿ ಲಾಯ್ಕ ಉಟ್ಟು. ಕಾಫಿ ಕೃಷಿಗೆ ಶೇಕಡ 40 ರಿಂದ 50 ರಷ್ಟ್ ನೆರಳಿದ್ದರೆ ಒಳ್ಳೆದ್. ಆಗ ಮಿಡಿಗ ಲಾಯ್ಕ ಕಟ್ಟಿಕಂಡದೆ. ಗಿಡ ಕೂಡ ಲಾಯ್ಕಲಿ ಬೆಳ್‌ದದೆ. ಕಾಫಿ ತೋಟಲಿ ಎಲ್ಲಾ ತರದ ಕಾಡ್ ಮರ ಇರೊಕು. ಇದರ ಎಲೆಗಳ್‌ಂದ ತೋಟಲಿ ಕಾಂಪೋಸ್ಟ್ ಉತ್ಪತ್ತಿಯಾದೆ. ಮರಗ ಇರ್‌ದರ್‌ಂದ ಕರಿಮೆಣಸು ಬಳ್ಳಿ ಹಬ್ಬ್‌ಸಿಕೆ ಅನುಕೂಲ ಆದೆ. ಹಂಗೆ ಎಲ್ಲಾ ತರದ ಹಣ್ಣ್‌ನೂ ಸಿಕ್ಕಿದೆ. ಕಾಫಿ ಲಾಯ್ಕ ಹಣ್ಣಾದ

ಮೇಲೆ ಕೊಯ್ಯೊಕು. ಮಾಲೆ ಕಾಯಿಲಿ ಕೊಯ್ದರೆ ಬೆಳೆಗಾರಂಗೆ ನಷ್ಟ ಆದೆ.

ಏಲಕ್ಕಿ ಕೃಷಿಲಿ ನಾನ್ ಮಂಜಿರ ಬಾದ್, ಕ್ಲೋನ್ 37, ಮಲ್ಟಿಕ್ಲೋನ್ ಹಂಗೆ ನೆಲ್ಯಾಣಿ ಗೋಲ್ಡ್ ಎಲ್ಲಾ ವೆರೈಟಿಗಳ್‌ನ ಬೆಳಿತಾ ಒಳೆ. ಇದ್‌ರ್‌ಲಿ ಉತ್ತಮ ಬೆಳೆ ನೆಲ್ಯಾಣಿ. ಏಲಕ್ಕಿಗೆ ವರ್ಷಲಿ ನಾಲ್ಕ್‌ರ್‌ಂದ ಐದು ಬಾರಿ ರಾಸಾಯನಿಕ ಸ್ಪ್ರೇ ಮಾಡೋಕು. 2 ರಿಂದ 3 ಸಲ ರಾಸಾಯನಿಕ ಗೊಬ್ಬರ ಹಾಕೋಕು. ವರ್ಷಕ್ಕೆ 5 ಸಲ ಜನವರಿ ತಿಂಗಳ್‌ಂದ ಮಳೆ ಬರುವವರೆಗೆ ಪ್ರತಿ 20 ದಿನಕ್ಕೊಮ್ಮೆ ನೀರು ಕೊಡೊಕು. ಶೇಕಡ 60 ರಿಂದ 70 ಭಾಗ ಏಲಕ್ಕಿಗೆ ನೆರ್‌ಳ್ ಇರೊಕು. ನೆಲ್ಯಾಣಿ ಗೋಲ್ಡ್ ತಳಿದ್ ವಿಶೇಷ ಏನ್‌ತಾ ಹೇಳ್‌ರೆ ಬೇರೆ ಜಾತಿಗಿಂತ ಕಾಯಿ ದಪ್ಪ ಇದ್ದದೆ. ಹಂಗೆ ಬೆಲೆ ಕೂಡ ಜಾಸ್ತಿ ಸಿಕ್ಕಿದೆ. ಬೇಡಿಕೆನೂ ಜಾಸ್ತಿ ಉಟ್ಟು. ಏಲಕ್ಕಿನ ಬರೀ ಕಾಡ್ ಮರದ ಅಡಿಲಿ ಬೆಳೆಸಕೂತಾ ಏನೂ ಇಲ್ಲೆ. ಅದನ್ನ ಗದ್ದೆಲಿ, ಅಡಿಕೆ ಮರಗಳ ಅಡಿಲಿ, ಪಾಣವಾಳ ಮರದ ಅಡಿಲಿ, ಕಡಂಗಗಳ್‌ಲಿ, ಎಲ್ಲೆಲ್ಲಿ ನೀರ್‌ನ ಸೌಕರ್ಯ ಉಟ್ಟೊ ಅಂತಲ್ಲೆಲ್ಲಾ ದಾರಾಳಾಗಿ ಏಲಕ್ಕಿ ಬೆಳೆಯಕ್.

ಅಡಿಕೆಲಿ ಮಂಗಳ, ತೀರ್ಥಳ್ಳಿ ಈ ಎರಡ್ ವೆರೈಟಿನ ನಾನ್ ಬೆಳಿತಾ ಒಳೆ. ಇದರ್‌ಲಿ ತೀರ್ಥಳ್ಳಿ ಬಾರೀ ಒಳ್ಳೆ ವೆರೈಟಿ. ಸಿಪ್ಪೆ ಸಣ್ಣ ಇದ್ದದೆ, ಹಂಗೆ ಅಡಿಕೆ ದಪ್ಪ ಇದ್ದದೆ. ಮರಲಿ ತುಂಬಾ ಅಡಿಕೆ ಹಿಡ್‌ದದೆ. ಅಡಿಕೆಗೆ ಒಳ್ಳೆ ಬೆಲೆನೂ ಸಿಕ್ಕಿದೆ. ಇದರ್‌ಂದ ಬೆಳೆಗಾರಂಗೆ ಲಾಭ ಆದೆ. ಅಡಿಕೆ ತೋಟಲಿ ಮಳೆಗಾಲಲಿ ನೀರ್ ನಿಲ್ಲ್‌ಕಾಗದ್, ನಿತ್ತರೆ ಅಡಿಕೆ ಉದ್‌ರ್‌ದೆ ಹಂಗಾಗಿ 2 ಸಾಲ್‌ನ ಮಧ್ಯ ಚರಂಡಿ ವ್ಯವಸ್ಥೆ ಇರೊಕು. ಬೇಸಿಗೆಲಿ ಅಡಿಕೆ ಕೊಯ್ಲ್ ಆದಂಗೆ 3–4 ಸಲ ಮರಕ್ಕೆ ನೀರ್ ಕೊಡೊಕು. ಆಗ ಮರಲಿ ಹಿಂಗಾರ ಲಾಯ್ಕ ಹೊರ್‌ಟದೆ. ಮಿಡಿ ಲಾಯ್ಕ ಕಚ್ಚಿದೆ. ಮೇ ಮತ್ತೆ ಜುಲೈ ತಿಂಗಳ ಕೊನೆಲಿ ಹಂಗೆ ಆಗಸ್ಟ್ ಸೆಪ್ಟಂಬರ್‌ಲಿ ಮಳೆ ಹೆಚ್ಚಿಗೆ ಇದ್ದರೆ ಸೆಪ್ಟೆಂಬರ್ ತಿಂಗಳ ಕೊನೆಲಿ ಸ್ಪ್ರೇ ಮಾಡ್‌ರೆ ಮಾತ್ರ ಅಡಿಕೆ ಮರಲಿ ನಿಂತದೆ. ಅಡಿಕೆಗೆ ಮೇ ಮತ್ತೆ ಸೆಪ್ಟಂಬರ್ ತಿಂಗಳ್‌ಲಿ ಎನ್.ಪಿ.ಕೆ. ಗೊಬ್ಬರ ಕೊಡೊಕು. ಜುಲೈ ತಿಂಗಳ ಕೊನೆಲಿ ಬರೀ ಪೊಟ್ಯಾಸ್ ಕೊಡೊಕು. ಅಡಿಕೆ ಒಡ್‌ದ್ ಬಿದ್ದರೆ ಜಿಂಕ್ ಬೊರಾನ್‌ನ 2 ರಿಂದ 3 ವರ್ಷಕ್ಕೊಮ್ಮೆ ಮರಕ್ಕೆ ಕೊಡೊಕು. 2 ವರ್ಷಕ್ಕೆ ಒಮ್ಮೆ ಮರಕ್ಕೆ ಸೆಗ್‌ಣಿ ಗೊಬ್ಬರ ಹಾಕಕು. ಈ ತರಲಿ ಬೆಳೆಸಿರೆ ಅಡಿಕೆ ಕೃಷಿಲಿ ಒಳ್ಳೆ ಫಸ್‌ಲಿ ತೆಗಿಯಕೆ ಸಾಧ್ಯ ಉಟ್ಟು.

ಕರಿ ಮೆಣಸ್‌ಲಿ ಪನ್ನೀರ್ ಒನ್, ಕರಿಮುಂಡ ಈ ಎರಡ್ ವೆರೈಟಿನ ಬೆಳೆ ನನ್ನಲ್ಲಿಟ್ಟು. ಇದರ್‌ಲಿ ಪನ್ನೀರ್ ಒನ್ ಒಳ್ಳೆದ್. ಇದ್‌ಕೆ ಮೇ ಮತ್ತೆ

ಸೆಪ್ಟೆಂಬರ್ ತಿಂಗಳ ಕೊನೆಗೆ 2 ಸಲ ಬೋಡೊ ಮಿಕ್ಸರ್ ಸ್ಪ್ರೇ ಮಾಡೋಕು. ಜನವರಿ ತಿಂಗಳ್‌ಂದ ಮಳೆ ಬಾಕನ ಮುಟ್ಟ ಪ್ರತಿ ತಿಂಗಳಿಗೊಂದು ಸಲ ನೀರು ಕೊಡೊಕು. ಪ್ರತಿ ವರ್ಷ ಬಳ್ಳಿಂದ ಮೂರಡಿ ಎತ್ತರಕ್ಕೆ ಚಿಗ್‌ರ್‌ಗಳ್‌ನ ತಟ್ಟಿಕಣೊಕು. ಜನವರಿ ತಿಂಗಳ್‌ಲಿ ನೀರ್ ಕೊಡ್‌ಕಾಕನ ದರ್‌ಗ್‌ಗಳನ್ನ ಬಳ್ಳಿ ಬುಡಕ್ಕೆ ಹಾಕೋಕು. ಇದರ್‌ಂದ ತೇವಾಂಶನ ಕಾಪಾಡಿಕೆ ಸಾಧ್ಯ ಆದ್. ಅಕ್ಟೋಬರ್ ತಿಂಗಳ್‌ಲಿ ಮೆಣಸು ಬುಡಕ್ಕೆ ಬೇವಿನ ಹಿಂಡಿ ಗೊಬ್ಬರ ಹಾಕಿ ಹುಡಿ ಮಣ್ಣ್‌ನ ಹಾಕೊಕು. ನೀರ್ ನಿಲ್ಲದಂಗೆ ಚರಂಡಿ ಮಾಡಿ ನೀರ್ ನಿಲ್ಲದಂಗೆ ನೋಡಿ ಕಣೊಕು.

ಬಾಳೆ ತಳಿಲಿ ಹೂ ಬಾಳೆ, ಮರಬಾಳೆ, ಪಚ್ಚೆಬಾಳೆ, ಚಂದ್ರಬಾಳೆ, ಬೂದಿಬಾಳೆ, ಹಂಗೆ ಸಾರು ಬಾಳೆ ಜಾತಿಯ ಬಾಳೆ ನನ್ನಲ್ಲುಟ್ಟು. ಬಾಳೆಗಿಡನ ಹೊಸದಾಗಿ ತೋಟ ಮಾಡ್‌ಕಾಕನ ಬಾಳೆ ಗಿಡಗಳ್‌ನ ಹಾಕಿ ತೋಟ ಮಾಡಕು. ಇದರ್‌ಂದ ಕಾಫಿ ತೋಟಲಿ ಕಚ್ಚಡ ಬಾದು ಕಮ್ಮಿ ಆದೆ. ಕಾಫಿ ಗಿಡಗಳಿಗೆ ನೆರಳ್‌ಕೊಟ್ಟದೆ. ಜೊತೆಗೆ ಬಾಳೆ ಗಿಡಂದ ಆದಾಯನೂ ಜಾಸ್ತಿ ಆದೆ.

ನನ್ನಲ್ಲಿ ತೀರ್ಥಹಳ್ಳಿ ಜಾತಿಯ ತೆಂಗಿನ ಮರ ಉಟ್ಟು. ಇದನ್ನ ತೋಟದ ಬೇಲಿಕೆರೆಗೆ ಹಂಗೆ ತೋಟದ ಮಧ್ಯ ದೂರ ದೂರಲಿ ಹಾಕೋಕು. 2 ರಿಂದ 3 ವರ್ಷಕ್ಕೆ ಒಂದು ಸಲ ತೆಂಗಿನ ಮರನ ಸ್ವಚ್ಛ ಮಾಡಿ, ಮರದ ಬುಡಕ್ಕೆ ಮತ್ತೆ ಕೊಡಿಗೆ ಉಪ್ಪು ಹಾಕೊಕು. ಆಗ ತೆಂಗಿನ ಮರಲಿ ಹೆಚ್ಚ್ ಫಸಲ್ ಕೊಟ್ಟದೆ. ಬುಡಕ್ಕೂ ಕಾಂಪೋಸ್ಟ್ ಸೊಪ್ಪು ಗೊಬ್ಬರಗಳ್‌ನ ಹಾಕೊಕು.

ಹೈನುಗಾರಿಕೆ ಸಹ ನಂಗೆ ತುಂಬಾ ಆಸಕ್ತಿ. 4 ಹಸು ಮತ್ತೆ 30 ರಿಂದ 35 ಎಮ್ಮೆ ಕೋಣಗಳ್‌ನ ಸಾಕ್‌ತಾ ಒಳೆ. ಇದರ್‌ಂದ ನಂಗೆ ಆರ್ಥಿಕ ಲಾಭ ಕಡಿಮೆ ಉಟ್ಟು. ಆದರೆ ಅವುಗಳ್‌ಂದ ಸಿಕ್ಕುವಂತ ಗೊಬ್ಬರಂದ ಕಾಂಪೋಸ್ಟ್ ಮಾಡ್ನೆ, ಗಂಜಳಂದ ಜೀವಾಮೃತ ಮಾಡ್ನೆ. ಈ ಕಾಂಪೋಸ್ಟ್ ಗೊಬ್ಬರನ ನನ್ನ ಬೇರೆ ಕೃಷಿ ಬೆಳೆಗೆ ಉಪಯೋಗಿಸಿನೆ. ಹೆಚ್ಚಿನ ಇಳುವರಿ ಬಂದದೆ. ಈ ಎಲ್ಲಾ ಕಾರಣಗಳ್‌ಂದ ಹೈನ್‌ಗಾರಿಕೆ ಲಾಭದಾಯಕವಾದ ಬೇಸಾಯತ ಹೇಳಕ್.

ನನ್ನಲ್ಲಿ ಡ್ಯೂರಾಕ್ ಮತ್ತೆ ಯಾರ್ಕ್ ಸ್ಯೆರ್ ತಳಿಯ ಹಂದಿಗ ಒಳ. ಡ್ಯೂರಾಕ್ ತಳಿಯ ಹಂದಿ ಒಳ್ಳೆದ್. ಇದರ್‌ಲಿ ಕಮ್ಮಿ ಚುಟ್ಟಿ ಇದ್ದದೆ. ವರ್ಷಕ್ಕೆ 150 ರಿಂದ 200 ಕೆ.ಜಿ. ವರೆಗೆ ಬೆಳ್‌ದದೆ. ಹಂಗೆ ಇದರ ಮಾಂಸ ಕೂಡ ತುಂಬಾ ಲಾಯ್ಕ ಉಟ್ಟು. ಇದರ ಗೊಬ್ಬರನ ನನ್ನ ಕೃಷಿಗೆ ಉಪಯೋಗಿಸಿಕಂಡನೆ. ಜೊತೆಗೆ ಆಡು ಕೂಡ ಸಾಕಿನೆ. ಅದರ ಗೊಬ್ಬರನ ಸಹ ಕೃಷಿಗೆ ಉಪಯೋಗಿಸಿನೆ. ಜೇನು ಸಾಕಣೆ ಮಾಡ್ತಾ ಒಳೆ. ಮನೆ ಖರ್ಚಿಗೆ ಬೇಕಾದ ಜೇನ್ ಸಿಕ್ಕಿದೆ. ಹಂಗೆ ಎಲ್ಲಾ ತೋಟಲಿ ಜೇನು ಪೆಟ್ಟಿಗೆ ಇಟ್ಟೊಳೆ. ಈ ಜೇನ್ ಹುಳಗಳ

ಪರಾಗಸ್ಪರ್ಶಂದ ಶೇಕಡ 20 ರಿಂದ 30 ರಷ್ಟ್ ನಮ್ಮ ಎಲ್ಲಾ ಬೆಳೆಗಳ್‌ಲಿ ಇಳುವರಿ ಹೆಚ್ಚಿದೆ.

**ಮೀನುಕೃಷಿ :** ನಂಗೆ ಮೇಲೆ ಹೇಳ್‌ದ ಎಲ್ಲಾ ಕೃಷಿಗಳಿಗಿಂತ ಹೆಚ್ಚ್ ಲಾಭದಾಕವಾದ ಕೃಷಿ ಮೀನು ಕೃಷಿ. ನನ್ನ ತೋಟಲಿ 8 ಕೆರೆ ಉಟ್ಟು. ಆ 8 ಕೆರೆಲಿ ಕೂಡ ಮೀನು ಕೃಷಿ ಮಾಡ್ತಾ ಒಳೆ. ಒಂದು ಕೆರೆಗೆ ಸರಾಸರಿ 5 ಸಾವಿರ ಕೆ.ಜಿ. ಮೀನ್‌ನ ಹಿಡ್‌ದನೆ. ರೋಹು, ಕಾಟ್ಲ, ಕಾಮನ್ ಕಾರ್ಪ್, ಗ್ರಾಡ್ ಕಾರ್ಪ್, ತಿಲಾಪಿಯ, ಬ್ರಗಾಲ್, ಬರೆ ಮೀನು, ಈ ಎಲ್ಲಾ ವೆರೈಟಿಗಳ ಮೀನ್‌ನ ನನ್ನ ಕೆರೆಲಿ ಬುಟ್ಟನೆ. ಇವು ತಿನ್ನುವ ಆಹಾರ ಬೇರೆ ಬೇರೆ. ಇವು ನೀರ್‌ಲಿ ಬೇರೆ ಬೇರೆ ಆಳಲಿ ವಾಸಿಸುವೆ. ಇದರ್‌ಂದ ನಾವು ಕೆರೆಲಿ ಎಲ್ಲಾ ಜಾತಿ ಮೀನ್‌ಗಳ್‌ನ್ನ ಬುಡೋಕು. ಆಗ ಮೀನು ಬೆಳೆಗಾರರಿಗೆ ಲಾಭ ಜಾಸ್ತಿ ಆದೆ. ಮೀನ್‌ನ ಬೆಳವಣಿಗೆನೂ ಲಾಯ್ಕ ಆದೆ. ನಾನ್ ಮೀನಿಗೆ ವಾಣಿಜ್ಯ ಆಹಾರನ ಕೊಟ್ಟನೆ. ಇದರ್‌ಂದಾಗಿ ಮೀನ್ ಮರಿಗಳ ಸಂಖ್ಯೆ ಜಾಸ್ತಿ ಬುಡಕ್, ಜೊತೆಗೆ ಮೀನ್ ಬೆಳವಣಿಗೆ ಕೂಡ ಬೇಗ ಆದೆ. ಮೀನ್ ಕೃಷಿಲಿ ಶೇಕಡ 45 ಖರ್ಚು ಬಂದದೆ. ನಂಗೆ ಮೀನು ಕೃಷಿಲಿ ಶೇ 55 ಲಾಭ ಉಟ್ಟು. ಮೀನುಗಾರಿಕೆ ಬೇರೆಲ್ಲಾ ಕೃಷಿಗೆ ಹೋಲಿಸಿರೆ ಲಾಭದಾಯಕ ಆಗುಟ್ಟು. ಮೀನುಕೃಷಿಗೆ ಪೂರಕ ಆಗಿ ನಾನ್ ಕೋಳಿ ಮತ್ತೆ ಬಾತ್‌ಕೋಳಿಗಳ್‌ನ್ನ ಸಾಕ್‌ತಾ ಒಳೆ.

ಕೋಳಿಗ ಹಾಕುವ ಹಿಕ್ಕೆ ಮೀನ್‌ಗಳಿಗೆ ಗೊಬ್ಬರ ಆದೆ. ಹಂಗೆ ಕೋಳಿಂದ ಮೊಟ್ಟೆ ಮತ್ತೆ ಮಾಂಸನೂ ಕೂಡ ನಾವು ಉಪಯೋಗಿಸಿಕಣಕ್. ಬಾತುಕೋಳಿಗ ನೀರ್‌ಲಿ ಈಜ್‌ಕಾಕನ ನೀರು ಗಾಳಿಯೊಟ್ಟಿಗೆ ಸೇರಿ ಆಮ್ಲಜನಕದ ಪ್ರಮಾಣನ ನೀರ್‌ಲಿ ಹೆಚ್ಚ್‌ಸಿದೆ. ಕೆರೆಲಿರುವ ಮೀನುಗಳಿಗೆ ಹೆಚ್ಚಿನ ಪ್ರಮಾಣಲಿ ಆಮ್ಲಜನಕದ ಪೂರೈಕೆ ಆದೆ. ಬಾತುಕೋಳಿಗಳ ಹಿಕ್ಕೆನೂ ಸಹ ಕೆರೆಗೆ ಗೊಬ್ಬರ ಆದೆ. ಬಾತ್‌ಕೋಳಿದ್ ಮೊಟ್ಟೆ ಮತ್ತೆ ಮಾಂಸನ ನಾವು ಆಹಾರ ಆಗಿ ಉಪಯೋಗಿಸಿಕಣಕ್. ಸಾವಯವ ಕೃಷಿನ ಬಳಕೆ ಮಾಡಿಕಂಡ್ ಎಲ್ಲಾ ರೀತಿದ್ ತರಕಾರಿ ಮತ್ತೆ ಹಣ್ಣ್‌ಗಳ್‌ನ್ನ ಬೆಳ್‌ಸಿನೆ. ಇದನ್ನ ಮಾರಾಟಕ್ಕೂ, ಮನೆಬಳಕೆಗೂ ಉಪಯೋಗಿಸಿನೆ.

ನನ್ನ ಅನುಭವದ ಪ್ರಕಾರ ಸಮಗ್ರ ಕೃಷಿ ಪ್ರತಿಯೊಬ್ಬ ರೈತಂಗೂ ಬೇಕು. ಸಮಗ್ರ ಕೃಷಿಯಿಂದ ಒಂದು ಕಡೆ ನಷ್ಟ ಆದರೂ ಇನ್ನೊಂದು ಕಡೆ ಲಾಭ ಆದೆ. ಅದ್‌ರ್‌ಂದ ಎಲ್ಲಾ ರೈತರೂ ಸಹ ಸಮಗ್ರ ಕೃಷಿನ ಮಾಡಿ. ಇದರ್‌ಂದ ರೈತ ನೆಮ್ಮದಿಲಿ ಬಾಳಕ್.

**✍ ಮಂದ್ರೀರ ತೇಜಸ್ ನಾಣಯ್ಯ**

## ಸಂಸ್ಕೃತಿ ದರ್ಪಣ

# ಮುತ್ತೈದೆಯ ಆಭರಣಗ

'ಹೆಣ್ಣ್ ಬಾಳ್‌ನ ಕಣ್ಣ್, ಬಾಳ್‌ನ ಬೆಳಗ್‌ವವುಳು', ಗಾದೆ ಹೇಳುವಂಗೆ 'ಹೆಣ್ಣ್ ಹುಟ್ಟಿದ ಮನೆಗೆ ನಂದಾದೀಪ. ಹತ್ತಿದ ಮನೆಗೆ ಆರದ ದೀಪ' ಆಗಿದ್ದದೆ. ಆ ಹೆಣ್ಣ್ ಬಯಸುದು ತಾನಿರುವ ಮುಟ್ಟ ನಂಗೆ ಮುತ್ತೈದೆ ಭಾಗ್ಯ ಸಿಗೋಕುತೇಳಿ ಮುತ್ತೈದೆಯರ ಲಕ್ಷಣ ಇದ್ದದೆ. ಆಭರಣಗಳನ್ನ ಹೆಣ್ಣ್ ಮೊದ್ವೆಯಾದ ಮೇಲೆಯೇ ತಿಳಿದುಕಂಡಿದ್ದದೆ. ಸಣ್ಣದಿರುಕಾಕನ ಎಲ್ಲಾ ಆಭರಣಗಳನ್ನ ಹಾಕಿಕಂಡಿದ್ರೂ, ಮೊದ್ವೆಯಾದ ನಂತರದ ದಿನಲಿ ತಾನು ಹಾಕಿಕಂಡಿದ್ದ ಆಭರಣಳಿ ಮುಖ್ಯವಾದ ಮಹತ್ವವುಟ್ಟುತೇಳಿ ಅರಿತಿದ್ದದೆ.



**ಬಳೆಗಳು :** ಕೈ ತುಂಬಾ ಬಳೆನ ಹಾಕಿಕಂಡರೆ ಶುಭ ಸೂಚನೆ ತೇಳಿ ಹಿರಿಯವು ಹೇಳುತ್ತಾ ಇದ್ದೊ ಮೊದ್ಲು. ಚಿನ್ನನ ಬಳೆಗಿಂತ ಗಾಜಿನ ಬಳೆನೇ ಲಾಯಕತ ಹೇಳ್ವೆ. ಏಕೆತೇಳ್ರೆ ಬಳೆಗಳ ನಿನಾದನೇ ಚೆಂದ ಆಗಿದ್ದದೆ. ಅದರ ಘಲ್-ಘಲ್ ಶಬ್ದ ಸಂಗೀತ ಕೇಳಿಕೆ ಹಾಡಿ ದಂಗೆ ಇದ್ದದೆ. ಬೇರೆ ಯಾವ ಕೆಲ್ಸ ಮಾಡು ಕಾಕನ ಸ ಕೈಲಿ ಹಾಕಿದ ಬಳೆಯ ಶಬ್ದ, ಆ ಬಣ್ಣಗ ಹೆಣ್ಣಿಗೆ ಸೌಂದರ್ಯ ಹೆಚ್ಚಿದಂಗೆ ಕಂಡದೆ. ಹಳೆ ಕಾಲಲಿ ಈಗ ಇದ್ದಂಗೆ ಮಿಕ್ಸಿಯಂಗೆ ಇರ್ವ ಯಂತ್ರ ಯಾವುದೂ ಇತ್ಲೆ. ಅಕ್ಕಿ ಮಸಾಲೆನ ಕುಟ್ಟೋಕು, ಅರೆಯೋಕು ಇಲ್ಲರೆ ರುಬ್ಬಕಾಗಿತ್ತ್. ವಾಷಿಂಗ್ ಮೆಷಿನ್ ನಂಗೆ ಯಾವ ಯಂತ್ರಗ ಇತ್ಲೆ. ಎಲ್ಲವೂ ಕಲ್ಲಿನ ಮೇಲೆ ಬಟ್ಟೆ ಒಗೆತಾ ಇದ್ದೊ. ಎಷ್ಟೊಂದ್ ಸೂಕ್ಷ್ಮಾಗಿ ಶಾಂತವಾಗಿ ಈ ಕೆಲ್ಸನೆಲ್ಲಾ ಮಾಡ್ತಾ ಇದ್ದೊ. ಕೈಯಿಂದ ಒಂದು ಬಳೆ ಸಹ ಒಡೆತಾ ಇತ್ಲೆ. ಯಾವುದೊಂದು ತಾರತಮ್ಯ ಇಲ್ಲದೆ ಬಳೆಗ ಕೈಲಿ ಮಿಂಚುತ್ತಾ ಇತ್ತ್. ಮುತ್ತೈದೆಗೆ ಬಳೆ ಒಂದು ಒಳ್ಳೆ ಲಕ್ಷಣ ಇದ್ದಂಗೆ.

**ಕಾಲುಂಗುರ :** ಬೆಳ್ಳಿ ಕಾಲುಂಗುರ... ಶ್ರೀಮತಿಗೆ ಸುಂದರ.... ಈ ವಾಕ್ಯ ಹೇಳುವಂಗೆ ಮುತ್ತೈದೆಗೆ ಬೇಕಾದ್ದ್ ಇನ್ನೊಂದು ವಸ್ತು ಕಾಲುಂಗುರ, ಅದರಲಿ ಬೆಳ್ಳಿ ಕಾಲುಂಗುರ ಇದು ಆದಿಕಾಲಂದಲೇ ಬಂದ ಸತಿಯ ಆಭರಣ ಆಗುಟು. ಒಂದು ಹೈದ ಬಂದು ಒಂದು ಗೂಡೆನ ನೋಡುಕಾಕನ ಮೊದ್ಲು ಕಾಲ್‌ನ ನೋಡ್ಡೆ. ಕಾರಣತೇಳ್ರೆ ಆ ಗೂಡೆಗೆ ಮೊದ್ವೆ ಆಗುಟ್ಟಾ ಇಲ್ಲೆತಾ ನೋಡಿಕೆ. ಕಾಲುಂಗುರ ಇದ್ದರೆ ಆ ಗೂಡೆಯ ಮೇಲೆ ಗೌರವ ಹೆಚ್ಚಾದೆ. ಅವನ ಭಾವನೆಯೆಲ್ಲಾ ಬದಲಾದೆ. ಎಂಥ ಶಕ್ತಿ ಉಟ್ಟು ಈ ಕಾಲುಂಗುರಕ್ಕೆ?



**ಮಾಂಗಲ್ಯ :** 'ಹೆಣ್ಣ್‌ಗೆ ಬೇಲಿ ತಾಳಿ' ತೇಳ್ದು ಹಿಂದಿನ ಕಾಲಂದ ಬಂದ ಒಂದು ಮಾತು. ನಾರಿಗೆ ನಿತ್ಯ ಸೌಭಾಗ್ಯವೇ ಮಾಂಗಲ್ಯ ಭಾಗ್ಯ ತೇಳಿ ಎಲ್ಲಾ ಹಿರಿಯವ್ರ ಆಶೀರ್ವಾದ ಪಡ್ದು, ಕುತ್ತಿಗೆಗೆ ಕಟ್ಟುವ

ಮಾಂಗಲ್ಯಕ್ಕೆ ತುಂಬಾ ಶಕ್ತಿ ಉಟ್ಟು. ಮೊದ್ವೆಗೆ ಸಾಕ್ಷಿಯಾದದ್ದೇ ಈ ತಾಳಿ. ಈ ಸೌಭಾಗ್ಯ ನೀಡಿದವರಿಗೆ ಹೆಣ್ಣ್ ಗೌರವ ನೀಡ್ದೆ. ಜೀವನ ಪೂರ್ತಿ ಅವನ ನಂಬಿಕಂಡ್ ಬಾಳಿ ಬದುಕಿದೆ. ಇದ್ ದೇವರು ನೀಡ್ದ ಬಂಧನ ತೇಳ್ವ ನಂಬಿಕೆಯೂ ಉಟ್ಟು. ಈ ಬಂಧನಕ್ಕೆ ಒಳಗಾದ ಹೆಣ್ಣ್‌ಗೆ ಅದೆಷ್ಟೋ ಜವಾಬ್ದಾರಿ ಇದ್ದದೆ. ಗಂಡನ ಏಳಿಗೆಗೆ ಹೆಣ್ಣ್ ಸಹಕಾರ ನೀಡ್ದೆ. ತನ್ನ ತನು–ಮನ ಸರ್ವಸ್ವನ ಒತ್ತೆ ಇಟ್ಟು ಮಹಾಲಕ್ಷ್ಮಿ ರೂಪ ತಾಳಿದೆ. ವಂಶ ಬೆಳೆಯಕೆ ಸಹಕರಿಸಿದೆ. ಇಷ್ಟ್ ಕೆಲ್ಸ ಮಾಡುವ ಬೆಲೆ ಕಟ್ಟದ ಮಾಂಗಲ್ಯಕ್ಕೆ ಇದ್ದದೆ.

**ಅರಶಿನ – ಕುಂಕುಮ :** ಹಳೆ ಕಾಲಲಿ ಮುಖ ತೊಳ್ದು ಹಣೆಗೆ ಬೊಟ್ಟು ಹಾಕಿಕೆ ಸ್ವಲ್ಪ ಹೊತ್ತಾದರೆ ಮನೆ ಹಿರಿಯವು 'ಹಣೆಗೆ ಕುಂಕುಮ' ಇಟ್ಟಿಲ್ಲೆತ ಕೇಳ್ತ ಇದ್ದೊ. ನಿನ್ನ ಗಂಡ ನೂರು ವರ್ಷ ಮುಟ್ಟ ಬಾಳಿ ಬದುಕಿದೆ... ನಿಂಗೆ ಮುತ್ತೈದೆ ಭಾಗ್ಯ ಬೇಡ'ತ ಹೇಳಿ ರಾಗ ಎಳ್ದ್ ಕೇಳ್ತಾ ಇದ್ದೊ. ಅದೇ ಮಾತಿಗೆ ಹಣೆಗೆ ಕುಂಕುಮ, ಕೆನ್ನೆಗೆ ಅರಶಿಣ ಇಟ್ಟ್ ದೇವರಿಗೆ ಕೈ ಮುಗಿತ್ತಾ ಇದ್ದೊ. ಆದರೆ ಈಗಿನ ಕಾಲಲಿ ಅಲಂಕಾರದ ಬೇರೆ ಬೇರೆ ಬೊಟ್ಟುಗಳನ್ನ ಇಟ್ಟವೆ.



ಇದೂ ಅಲ್ಲದೆ ಕರುನಾಡ ತಾಯಿ ಬಾವುಟ ಚಿಹ್ನೆ ಸಹ ಅರಶಿಣ ಕುಂಕುಮ ಬಣ್ಣದೇ ಆಗುಟ್ಟು. ಹಂಗಾದರೆ ಕರುನಾಡ ತಾಯಿ ಸಹ ಸದಾ ಸೌಭಾಗ್ಯವತಿಯಂಗೆ ಕಂಡದೆ.

**ಹೂವು :** 'ಹೂವು ಚೆಲುವೆಲ್ಲಾ ನಂದೆಂದಿತು, ಹೆಣ್ಣು ಹೂವ ಮುಡಿದು ಚೆಲುವೇ ತಾನೆಂದಿತು' ಎಂಥ ಅರ್ಥ ಕೊಟ್ಟದೆ ಈ ಪದ (ಹಾಡ್). ಗಿಡದಲ್ಲಿರುಕಾಕನ ಹೂವಿನ ಅಂದವೇ ಬೇರೆ ಆಗಿದ್ದದೆ. ಹೆಣ್ಣ್‌ನ ಮುಡಿಗೆ ಆ ಹೂ ಬಂದಾಕನ ಅದರ ಅಂದವೇ ಇನ್ನೊಂದ್ ರೀತಿ ಆಗಿದ್ದದೆ. ಹೆಣ್ಣ್‌ಗೆ ಹೂವು ಶುಭ ಸೂಚನೆಂತು ಹೇಳ್ವೆ. ಇದರ ಜತೇಲಿ ಮೂಗುತಿ ಕೂಡ ಮೂಗಿಗೆ ಒಂದು ರೀತ ಅವಲಕ್ಷಣ ಮಾಡಿಕಣಿಕೆ ಅಂದತೇಳಿ ಹೇಳಕು. ವಿಪರೀತ ಅವಲಕ್ಷಣ ಮಾಡಿಕಣಿಕೆ ಆಗದು.ಮಿತವಾದ (ಸಣ್ಣದಾದ) ಅಳತೆದ್ದು ಮೂಗುತಿ ಇನ್ನಷ್ಟು ಒಳ್ಳೆದು. ಇನ್ನ್ ಕಾಲ್‌ಗೆಜ್ಜೆ, ಹೆಣ್ಣ್ ಗೆಜ್ಜೆನ ಜಾರದಂಗೆ ನೋಡಿ ಕೋಣೋಕು. ಆ ಹೆಜ್ಜೆ ಗೆಜ್ಜೆ ಜತೇಲಿ ಇಟ್ಟಾಕನ ಎಚ್ಚರಿಕೆ ಜತೇಲಿ ಕಾಲ್‌ನ ಅಂದ ಹೆಚ್ಚಿದೆ. ಆದ್ದರಿಂದ ಸೀರೆವುಟ್ಟವು ಮುತ್ತೈದೆ ಆಭರಣದ ಬಗ್ಗೆ ಚಿಂತನೆ ಮಾಡಿ ಹೆಚ್ಚಾಗಿ (ಮೈ ತುಂಬಾ ಎದ್ದ್ ಕಾಣುವಂಗೆ) ಹಾಕಿಕಣದೆ, ಮಿತವಾಗಿ ಹಾಕಿಕಂಡರೆ ಅಂತವುಕೆ ಆಸಕ್ತಿ ತೋರುವಂತಾಗಲಿ ತೇಳ್ದು ನನ್ನ ಭಾವನೆ.



✍ ಎಂ.ವಿ. ಮೋಹನ್‌ಕುಮಾರ್

# ಅವಂದೂರು ಗ್ರಾಮಲಿ ನಡ್ದ ಕಿಡಾಸ ಹಬ್ಬ

ಪ್ರಾದೇಶಿಕ ಭಾಷೆಗ ನಗರೀಕರಣದ ವ್ಯವಸ್ಥೆಲಿ ಅಳ್ದ್ ಹೋಗ್ತಾಯಿರ್‌ವ ಅಪಾಯನ ಮನಗಂಡ ಸರಕಾರ ಭಾಷಾ ಅಕಾಡೆಮಿಗಳ್‌ನ ಸ್ಥಾಪನೆ ಮಾಡಿ-ಭಾಷೆನ ಉಳಿವಿಗೆ ಸಂಸ್ಕೃತಿ ಉಳ್ಸುವ ಮುಖಾಂತರ ಸಾಹಿತ್ಯನ ಬೆಳ್‌ಸುವ ಮಹತ್ವದ ಜವಾಬ್ದಾರಿನ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಂತೇಳಿ ಅರೆಭಾಷಿಗರಿಗೆ ಕೊಟ್ಟುಟು. ಈ ಜವಾಬ್ದಾರಿ 2012 ಕ್ಕೆ ಸುರಾಗಿ ನಾಕನೆ ಅವದಿಗೆ ಶ್ರೀ ಲಕ್ಷ್ಮಿನಾರಾಯಣ ಕಜಗದ್ದೆಯವರ್‌ನ ಅಧ್ಯಕ್ಷರನ್ನಾಗಿ ಸರಕಾರ ಮಾಡಿಟು. ಅನುಭವಕ್ಕಾಗಿ ಹಿರಿಯೊವರ್‌ನ-ಹುರ್‌ಪುಲಿ ಕೆಲಸ ಮಾಡಿಕೆ ಯುವಕರ್‌ನ ಸಮಿತಿ ಸದಸ್ಯರಾಗಿ ನೇಮಿಸೊಳೊ. ಹಿರಿಯೊವು ಮತ್ತೆ ಸಮಾನ ವಯಸ್ಕರ್ ಉದ್ದೇಶದ ಏಳಿಗೆಗೆ ಕೆಲ್‌ಸ ಮಾಡ್ತಾ ಹೊಂದಾಣಿಕೆಲಿ ಎರಡ್ ಜಿಲ್ಲೆಗಳ್‌ಲಿ ಕೆಲು ವ್ಯತ್ಯಾಸಯಿದ್ರೂ ಎಲ್ಲವೂ ಒಂದೇ ದಾರಿಲಿ ಸಾಗಿಕೆ ಕಾರ್ಯ ರೂಪುಸ್ತಾ ವೊಳೊ.



2019 ಕ್ಕೆ ನಾಕನೆ ಸಮಿತಿ ಸುರಾಗಿ ಬಹಳ ಸಮಯ ರಿಜಿಸ್ಟ್ರಾರ್ ಹಂಗೆ ಸಮಿತಿ ಸದಸ್ಯರ ಕೊರ್‌ತೆ ಕಾಡ್ತಾಯಿದ್ದರೂ ಸುರುನ ಸಲ ಫೆಬ್ರವರಿ ತಿಂಗ ರೈತ ಸಂಸ್ಕೃತಿಲಿ ಬರ್‌ವ ಕಿಡಾಸ ಹಬ್ಬಕ್ಕೆ ಮಹತ್ವ ಕೊಟ್ಟ್ ಮಡಿಕೇರಿಂದ 18 ಕಿ.ಮೀ. ದೂರದ ಅವಂದೂರು ಗ್ರಾಮನ ಆರ್‌ಸಿಕಂಡ್ ಅಧ್ಯಕ್ಷರ್ ಮತ್ತೆ ಸಮಿತಿಯವು ಅಲ್ಲಿಗೆ ಭೇಟಿ ಕೊಟ್ಟೊ. ಕಾಫಿ ಕೊಯ್ಲ್‌ನ ಬಿಡುವಿಲ್ಲದ ಸಮಯಲಿ ಮನೆ ಬಾಗ್‌ಲ್‌ಗೆ ಬಂದ ಸರಕಾರದ ಅವಕಾಸನ ಉಪಯೋಗ್ಸಿಕಂಬಕೆ ಮುಂದೆ ಬಂದೊ ಪಟ್ಟಡ ಕುಟುಂಬದ ಐನ್‌ಮನೆ ಜೀರ್ಣೋದ್ಧರ ಸಂಘದವು. ವಿಶಾಲ ಅಂಗಳನ ದಾರಾಳಾಗಿ ಬಳ್‌ಸಿಕಣಿಕೆ ಬುಟ್ಟ್‌ಕೊಟ್ಟ್ ಸಮಿತಿಗಳ್‌ನ ರಚನೆ ಮಾಡಿ ಕಾರ್ಯ ಸುರು ಮಾಡಿಕೆ ಅಕಾಡೆಮಿಯೊಟ್ಟಿಗೆ ಕೈ ಜೋಡ್‌ಸಿದೊ.

ಮುಳ್ಳುನ ಮುಳ್ಳಿಂದಲೆ ತೆಗೆಕುತೇಳ್‌ವ ಅರೆಭಾಷೆ ಗಾದೆನ ಹಂಗೆ

ಯಾವೊಂದು ಕೆಲ್‌ಸ ಮಾಡೊಕುತಾದರೆ ಹಳ್ಳಿಗಳ ಮೂಲೆ ಮೂಲೆಗಳಿಗೆ ಪ್ರಚಾರ ಕೊಟ್ಟರೆ ಮಾತ್ರ ಪ್ರತಿಭೆಗ ಮುಂದೆ ಬಾಕೆ ಸಾಧ್ಯವುಟ್ಟುತೇಳ್‌ದರ್‌ನ ಅಲ್ಲಿನವು ಕೈ ಜೋಡ್‌ಸಿ ತೋರಿಸಿದೊ. ಕಾರ್ಯಕ್ರಮದ ವಿವರಣೆ ತಿಳ್‌ದ ಹೆಣ್ಮಕ್ಕಳ ತಂಡನ ಪಟ್ಟಡ ಹೇಮ ವಹಿಸಿಕಂಡ್ ನಮ್ಮ ಕೆಲ್‌ಸನ ಹಗುರ ಮಾಡಿಕೆ ಹಲವು ಹೆಣ್ಮಕ್ಕ ಮುಂದೆ ಬಂದೊ. ಇವು ದಿನಾ ನಾಕ್ ಗಂಟೆಮುಟ್ಟ ಕಾಫಿ ಕೊಯ್ದ್ ಒಂದು ಕಡೆ ಸೇರಿ ಆರ್ ಗಂಟೆ ಮುಟ್ಟ ತರಬೇತಿ ಪಡ್ಕಂಡ್ ಬಾರಿ ಹುರ್‌ಪ್‌ಲಿ ಅವರ ಕೆಲ್‌ಸನ ಸುರು ಮಾಡ್ತೊ. ಇವುಕೆ ಚೊಕ್ಕಾಡಿ ಪ್ರೇಮನವು ಸಹಕಾರ ಕೊಟ್ಟೊ. ಇವರ ವಿಶೇಷ ಏನ್‌ಂತೇಳ್ರೆ–ಅತ್ತೆ ಸೊಸೆಕ, ಅಜ್ಜಿ ಪಿಳ್ಳಿಕಳ ಪಡ್ದವು ಅಜ್ಜ ಪಿಳ್ಳಿಕ ಎಲ್ಲವು ಸೇರ್ದ ಸಾಂಸ್ಕೃತಿಕ ಸಂಘಟನೆ ನಮ್ಮಲ್ಲಿ ಚೇತರಿಕೆ ತಾತ್. ಕಿಡಾಸತೇಳ್ದು ತುಳು ಬಾಸೆಲಿ ಕೆಡ್ಡಾಸ – ಕೊಡ್ಗ್‌ಲಿ ಕಿಡಾಸ ತೇಳ್‌ವ ಮಾತ್‌ನ ಶಬ್ದಲಿ ವ್ಯತ್ಯಾಸವುಟ್ಟು. ಆಚರಣೆಲಿ ಕೂಡಾ.

ಕಿಡಾಸತೇಳ್‌ದು ಪ್ರತಿ ವರ್ಷ ಫೆಬ್ರವರಿ ಸಂಕ್ರಮಣಲಿ ಬಂದದೆ. ವರ್ಷಲಿ ಬೆಳೆವ ಭತ್ತನ ಕಡಿಕೆ ಪತ್ತಾಯಗಳ್‌ಲಿ ಕಟ್ಟಿ ತುಂಬ್‌ಸಿ ಅದ್‌ಕೆ ಕತ್ರಿತರ 2 ಮುಳ್ಳುಗೆಲ್ಲ್ ಮಡ್ಗಿ ಮ್ಯಾಲೆ ಸಣ್ಣ ಕಲ್ಲ್ ಇಸುವೆ. ಇದ್‌ಕೆ ಅರೆಭಾಸೆಲಿ ಕಲ್ಲ್‌ಮುಳ್ಳು ಅಡ್ಕುದುತೇಳ್ವೆ. ಇದ್ ಭತ್ತದ ರಕ್ಷಣೆಗೆ ತೇಳ್‌ವ ನಂಬಿಗೆ ಇದರೊಟ್ಟಿಗೆ ಭತ್ತ ತೆಗಿಯೊಕುತಾದರೆ ವಳ್ಳ ದಿನಲಿ ಹೊತಾರೆ ಚೊಂಬುಕ ಹಕ್ಕಿ ಮರ್ಡುದು ಕೇಳ್‌ದ ಮ್ಯಾಲೆ ತೆಗಿಯೊಕುತೇಳ್‌ವ ನಂಬಿಕೆ ಹಿಂದೆನದ್.

ಭೂಮಿ ತಾಯ ಪೂಜೆ ಪ್ರಕೃತಿ ಮಾತೆ ಪೂಜೆ
ಪೊನ್ನಿ ತಿಂಗ ಸಂಕ್ರಮಣಲಿ ಭೂಮಿ ಪೂಜೆ ಮಾಡುವೆ
ಸಮೃದ್ಧಿ ಆಚರ್‌ಣೆ ಪಲ ಸಿದ್ದಿಗೆ ರೈತರ್
ಪ್ರಕೃತಿಮಾತೆ ಭೂತಾಯ್‌ನ ಪೂಜೆ ಮಾಡುವೆ.
ಭೂಮಿತಾಯಿ ಪೂಜೆ ಕಿಡಾಸ ಹಬ್ಬದ ಗುಟ್ಟು
ಸಮೃದ್ಧಿ ಪಲಸಿದ್ದಿ ಹುಟ್ಟು ಸ್ವರೂಪಲಿವುಟ್ಟು॥
ಸುರುದಿನ ಅಂಗಳಲಿ ಸೆಗ್‌ಣಿ ಸಾರ್‌ಸುವೆ.
ಎರಡ್ನೆ ದಿನ ಅಡ್‌ಗೆಗೆ ತರ್ಕಾರಿ ಪಲತಂದ್ ಮೊಡ್ಗ್‌ವೆ.
ಮೂರ್‌ನೆದಿನ ಅಡ್‌ಗೆ ಮನೆಲಿ ಬಾಳ್‌ಲೆ ಹಾಸುವೆ.
ಭತ್ತಕಾಳ್ ತಿಂಬಕೆ ಬರ್‌ವ ಮೃಗಪಕ್ಷಿಗಳ್‌ನ
ಓಡ್ಸುವ ನೆಪಲಿ ಎಲ್ಲವೂ ಕೂಡಿ ಬ್ಯಾಟೆ ಮಾಡುವೆ॥
ಕೋಳಿಕೂಂಗಿಕೆ ಮುಂದೆ ಮನೆ ಮುತ್ತೈದೆ ಮೀದ್ ಬಂದ್
ಏಳ್ ಸುರ್‌ಳಿ ಸೊಪ್ಪು ತಂದ್ ಅದರ್‌ಲಿ ಬತ್ತಿ ಬೆಳ್‌ಗಿದೆ.
ಭೂಮಿ ತಾಯಿ ತಂಪಾಗಿರಿಕೆ ಎಣ್ಣೆ ಹೊಯ್‌ದವೆ
ತಂಪಾದ ಭೂಮಿಲಿ ಪಲಕೆ ಬೇಡ್‌ವೆ॥
ಕೃಷಿ ಮಾಡ್ವ ಜನಾಂಗಕೆಲ್ಲ ಇದೊಂದು ಸುಗ್ಗಿ ಹಬ್ಬ
ಮರಗಿಡ ಹಣ್ಣೆಲೆ ಕಳ್‌ಚಿ ಚಿಗ್‌ರ್ ಬುಡುವ ಕಾಲ

ಭತ್ತ ಕಾಳ್ ಮನೆಗೆ ಬಂದ ಕಾಲ ಇದ್ ವಸಂತ ಕಾಲ
ಪೊನ್ನಿ ತಿಂಗ ಸಂಕ್ರಮಣದ ಹಬ್ಬ ಇದ್ ಕಿಡಾಸ ಹಬ್ಬ।
ಭೂಮಿ ತಾಯ್ ಗೆ ಎಣ್ಣೆ ಬುಡ್ದು ರೈತ ಜೆನರ ಹಬ್ಬ
ಇದ್ ರೈತ ಸಂಸ್ಕೃತಿ– ರೈತರ ಜನಪದ ಸಂಸ್ಕೃತಿ॥

ಪ್ರಕೃತಿ ಸಿರಿಗೆ ಹೆಸ್‌ರಾದ ಅವಂದೂರು ಗ್ರಾಮ ಕೊಡ್ಗ್ ಜಿಲ್ಲೆಲಿ ಅತೀ ಸಣ್ಣ ಊರು. ಅರೆಭಾಷೆನವೇ ಇರ್‌ವ ಇಲ್ಲಿ ಬಿಲ್ಲವ, ಆಚಾರಿ, ಕುಂಬಾರ, ಹಜಾಮ, ಬ್ರಾಹ್ಮಣರ್ ಹಿಂದೆಯಿದ್ದೊ. ಇವೆಲ್ಲವೂ ಅರೆಬಾಸೆ ಮಾತಾಡವು ಮತ್ತೆ ಬ್ರಾಹ್ಮಣರ್ ಕನ್ನಡ ಬುಟ್ಟ್‌ತ್‌ಲೆ. ಇಲ್ಲಿ ಗೋಪಾಲ ಕೃಷ್ಣನ ನೆಲೆವುಟ್ಟು. ಮಕ್ಕಳ ಫಲ ದನಗಳ ಆರೋಗ್ಯಕ್ಕಾಗಿ ವಿಶೇಷ ಹರ್‌ಕೆ ಪಲಿಸಿದೆತೇಳ್‌ವ ನಂಬಿಕೆವುಟ್ಟು. ಬಿಸು ಹಬ್ಬ ಇಲ್ಲಿನ ವಿಶೇಷ ಪೂಜೆ. ಊರುಲಿ ಚೌಂಡಿ ಸಾರ್ತಾವು ಐಯ್ಯಪ್ಪ ತೆರೆಗ ಮಲೆಯ ಪಣಿಕ ಜನರ್‌ಂದ ನಡ್‌ದದೆ. ಇಲ್ಲಿ ಮಳೆಗಾಲ ತೋಡುಗಳ್‌ಂದ ಇಳಿವ ಜಲಪಾತಗ ಕಲ್ಲ್‌ಗಳ್‌ನ ಉರ್‌ಳ್‌ಸುವ ಗುಡುಗುಡು ಸದ್ದ್ ದೂರಕೆ ಮುಟ್ಟ ಕೇಳಿ ಜನರ್‌ನ ಬೆಚ್ಚಿಸಿದೆ. ಮಾನಿಗದ್ದೆಗ ಮೆಟ್ಲ್‌ನಂಗೆ ಕಂಡದೆ. ಇನ್ನ್ ಇಲ್ಲಿನ ಕುಂದುಗಳಿಗೆ ಕೊತ್ತಲಮೊಟ್ಟೆ– ಪಣಿಕೆರ ಮೊಟ್ಟೆ, ಉದ್ದಮೊಟ್ಟೆ– ಉರುಟುಮೊಟ್ಟೆ, ಮಕ್ಕಳ ಗದ್ದೆತೇಳಿ ಹೆಸ್‌ರುಟ್ಟು. ಇದರ ಕೊಡಿಲಿ ನಿತ್ತ್ ನೋಡ್ರೆ ಕೊಡ್ಗ್‌ನ ಮೂಲೆ ಮೂಲೆ ಕಾಂಬಕೆ ಸಿಕ್ಕಿದೆ.

ಪಾರೆಕಲ್ಲ್‌ಗಳಿಗೆ, ಹಂದಿ ಪಾರೆ, ಹುಲಿ ಪಾರೆ, ಮೊಸಳೆ ಪಾರೆ, ಝುರಿಪಾರೆ ಹೆಸ್‌ರಾದರೆ, ಬನಗಳಿಗೆ ಐಯ್ಯಪ್ಪ ಬನ, ಕಾಡಯ್ಯಪ್ಪ ಬನ, ಚೌಂಡಿ ಬನ, ನಾಗಬನ, ಅಂಬಲ ಮಾನಿ, ತೆರೆಮಾನಿತ ಹೆಸ್‌ರುಟ್ಟು. ಏಪ್ರಿಲ್ ತಿಂಗ ಬಂದರೆ ಸಾಕ್, ಕುಂದುಗಳಲಿ ಗೊಟ್ಟೆ ಹಣ್ಣ್, ಅಮೆ ಹಣ್ಣ್, ಚೇಪೆ ಹಣ್ಣ್, ಇಡ್‌ಂಜಿ, ನುಚ್ಚಟೆ, ರಂಜೊಳ, ಇಪ್ಪುಲಿ, ಜೀರುಂಗುಳಿ, ಜಂನೇರ್‌ಲ, ಕಾಡ್ ಹಲ್‌ಸ್, ಹಾಲೆ, ಸಾಕಷ್ಟ್ ಸಿಕ್ಕಿ ಮಕ್ಕಳಿಗೂ ಪ್ರವಾಸಿಗರಿಗೂ ಇಷ್ಟವಾದ ಪ್ರವಾಸ ಆದೆ.

ಗುಡಿ ಕೈಗಾರಿಕೆಲಿ ಈ ಊರು ಬಹಳ ಮುಂದು. ಬೆತ್ತ–ವಾಟೆಲಿ ಕುಕ್ಕೆ, ಬರ್‌ಂಜಿ, ಗೊರ್‌ಗು ಇವುಕೆ ವಳ್ಳೆ ಬೇಡಿಕೆವುಟ್ಟು. ಇದರ್ನೆಲ್ಲಾ ಅವು ತಯಾರ್ಸುವೆ.

ಈಗನ ಕಾಲಲಿ ಶಾಂತಿ ನೆಮ್ಮದಿ ಸಿಕ್ಕಿಕೆ ಕಷ್ಟವುಟ್ಟು. ಶ್ರಮಪಟ್ಟ್ ಬೆಳ್‌ಸಿದ ಪಸ್‌ಲ್‌ನ 10–12 ಆನೆಗ ಒಮ್ಮೆಗೆ ಬಂದ್ ನಾಶ ಮಾಡ್‌ರೆ ಕಾಟಿಗ ಸಹ ಆರಾಮಾಗಿ ಓಡಾಡ್ತಾ ಹಾಳ್ ಮಾಡ್ತಾವಳೊತೇಳ್ವೆ ಇಲ್ಲಿನ ಕೃಷಿಕರ್. ಹಿಂದೆನ ಕಾಲಲಿ ಜನ ಬ್ಯಾಟೆ ಮಾಡ್‌ತಿದ್ದೊ. ಇದ್ ಮನೊರಂಜನೆಗೂ ಆಹಾರಕ್ಕೂ ಆಗ್‌ತಿತ್ತ್. ಈಗ ಸರಕಾರದ ಕಾನೂನು ಬಿಗಿವುಟ್ಟು. ಇಲ್ಲಿ ಮೂರು ಸ್ತ್ರೀಶಕ್ತಿ ಗುಂಪುಗ ಯಿದ್ದ್, ಅವರದೇ ಕಾರ್ಯಲಿ ತೊಡಗಿ ಹುರ್‌ಪುಲಿ ವಳೊ. ಅವರವರ ತೋಟದ ಕೆಲ್ಸನ ಅವೇ ಮಾಡ್ಕಂಡವೆ. ಹಿಂಗೆ ಅಲ್ಲಿನವು ಬಹಳ ಶ್ರಮಜೀವಿಗ.

ಇಂತಹ ಅವಂದೂರು ಗ್ರಾಮಲಿ ಕರ್ನಾಟಕ ಅರೆಬಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ನಡ್ಸಿದ ಸುರುನ ಕಾರ್ಯಕ್ರಮ ಬಹಳ ಅರ್ಥಪೂರ್ಣವಾಗಿಟ್ಟು. ಕಾರ್ಯಕ್ರಮದ ಉದ್ಘಾಟನೆನ ಜಿಲ್ಲಾ ಪಂಚಾಯತ್ ಸದಸ್ಯೆ ಯಾಲದಾಳು

ಪದ್ಮಾವತಿಯವು ಚಾಲನೆ ನೀಡಿ ಮಕ್ಕ ಮೊಬೈಲ್ ಅವಶ್ಯವಿರ್‌ವಷ್ಟ್ ಬಳ್‌ಸಿಕಂಡ್ ಹಳ್ಳಿಗಳ ಸಂಸ್ಕೃತಿನ ನೋಡಿ ತಿಳ್ಕಣಕುತೇಳ್‌ರೆ –ಅತಿಥಿಯಾಗಿ ಕೊಡಪಾಲು ಗಣಪತಿಯವು ಸಂಸ್ಕೃತಿ ಬಗ್ಗೆ ಮಾತಾಡ್ತಾ ಬಂದುತ್ವ ಉಳಿಯೊಕುತಾದರೆ ಜನಾಂಗದೊಳಗೆ ನೆಂಟಸ್ಥಾನ ಆಕು, ಭತ್ತದ ಬೆಳೆನ ಬೆಳ್ಸುವಲ್ಲಿ ಎಲ್ಲವೂ ಮುಂದಾಕುತೇಳ್ದೊ– ಈ ಸಂದರ್ಭಲಿ ಕೊಡಪಾಲು ಗಣಪತಿಯವು ಯುವಕರ ತಂಡಕ್ಕೆ ಪರಿಕರ ವಿತರಣೆ ಮಾಡಿ ಸರಕಾರ ಕೊಟ್ಟ ಪರಿಕರಗಳ್‌ನ ಜೋಪಾನಾಗಿ ಮಡ್ಕಂಡ್ ಅದರ ಫಲ ಪಡಿಯಕೆ ಹಾರೈಸಿದೊ. ಸಮಯಕ್ಕೆ ಸರಿಯಾಗಿ ಬೆಂಗಳೂರ್‌ಂದ ಕೊಂಬನ ಪ್ರವೀಣನವು ಬಂದ್ ಪರಿಕರ ತಲ್‌ಪಿಸಿದೊ.. ತಾಲೋಕು ಪಂಚಾಯಿತಿ ಸದಸ್ಯೆ ತುಮುತ್ತಜ್ಜಿರ ಕುಮುದಾ, ಮುದ್ಯನ ಚಂದ್ರಶೇಖರ್, ಗ್ರಾಮ ಪಂಚಾಯಿತಿ ಸದಸ್ಯ ಕಾಳೇರಮ್ಮನ ಅಶೋಕ, ಸವಿತಾ ಆಚಾರ್ಯ, ಪಟ್ಟಡ ಕುಟುಂಬದ ಪಟ್ಟೆದಾರರ್ ಮಾತನಾಡ್ದೊ.

ವಿಚಾರಗೋಷ್ಠಿಲಿ ಅರೆಭಾಸೆ ಹಬ್ಬಲಿ ಕಿಡಾಸ ಹಬ್ಬದ ಮಹತ್ವ ಕುರ್ತ್ ಡಾ॥ ಕೋರನ ಸರಸ್ವತಿಯವು ಹಿನ್ನೆಲೆ ಜಾನಪದ, ನಂಬಿಕೆ, ಪ್ರಾದೇಶಿಕ ವಿಭಿನ್ನತೆ ಬಗ್ಗೆ ವಿವರ ಕೊಟ್ಟೊ. ಪಟ್ಟಡ ಕುಟುಂಬದ ಜೀರ್ಣೋದ್ಧಾರ ಸಂಘದ ಅಧ್ಯಕ್ಷರಾದ ಶ್ರೀ ಪಟ್ಟಡ ಉಲ್ಲಾಸ್‌ನವು ನಮ್ಮ ಊರು ನಮ್ಮ ಐನ್‌ಮನೆ ಬಗ್ಗೆ ಊರುಗಳಿಗೆ ಹೆಸ್‌ರ್ ಹಾಕುವ ಕಾಲಲಿ ಬುಟ್ಟ್‌ಹೋದ ಆ ಒಂದೂರಿಗೆ ಅವಂದೂರುತೇಳಿ ಹೆಸರ್ ಬಂದ ಬಗ್ಗೆ ಹಾಲೇರಿ ಅರಸರ ಕಾಲಲಿ ಹಿರಿಯರ್ ಸೈನ್ಯ ಸೇವೆಲಿ ಅವಂದೂರ್‌ಂದ ಮಡಿಕೇರಿಗೆ ಮುಟ್ಟ ಒಡಿಕತ್ತಿ ಹಿಡ್ದ್ ಕುದುರೆಲಿ ಓಡಾಡ್ತಯಿದ್ದದ್ ಗೌರವಿಸಿದ ಬಗ್ಗೆ ಮಾಹಿತಿ ಕೊಟ್ಟೊ. ನಾನೂರು ವರ್ಷಗಳ ಇತಿಹಾಸ ಈ ಅವಂದೂರಿಗೆ ಇದ್ದ್, ಟಿಪ್ಪುನ ಕಾಲಲಿ ಅಮ್ಮ ಕೊಡವರ್ ನಾಶ ಆದ ಮ್ಯಾಲೆ ತನ್ನದೆ ಕೊಡಗ್ ದೇಶದ ಗಡಿ ಭಾಗಗಳ್‌ಂದ ಅರಸರ್ 20 ಗೌಡ ಒಕ್ಕಲ್‌ಗಳ್ನ ಕರ್ಸಿ ಜಮ್ಮ ಕೊಟ್ಟ್ ಕೂರ್ಸಿದ ವಿಸಯ ತಿಳ್ಸಿದೊ.

ಕವಿಗೋಷ್ಠಿಲಿ ಬಾರಿಯಂಡ ಜೋಯಪ್ಪ, ಕಡ್ಲೇರ ತುಳ್‌ಸಿ ಮೋಹನ್, ಪಟ್ಟಡ ಸುಗುಣ ಕುಮಾರ್, ಕಡ್ಲೇರ ಜಯಲಕ್ಷ್ಮಿ, ತೆಕ್ಕಡೆ ಕುಮಾರ ಸ್ವಾಮಿಯವರ ಕವನ ವಾಚನಗ ಅವರ ಮನ್ಸ್‌ನ ಐನ್‌ಮನೆ ಭಾವನೆಗಳ್‌ನ ಒತ್ತಿ ಹಾಕಿದೊ.

ವಸ್ತು ಪ್ರದರ್ಶನ, ಹಳೆ ವಸ್ತುಗಳ ಗುಡಿಕೈಗಾರಿಕೆ ಒಡಿಕತ್ತಿ ಸೇರ್‌ದಂಗೆ ಹಲವಾರು ವಸ್ತುಗ ಆಕರ್ಷಕವಾಗಿದ್ದ್ ನೋಡುಗರ ಕಣ್ಣ್‌ನ ತಣ್‌ಸಿತ್‌ತೇಳ್ದೊ ಜನ ಇದ್‌ಕೆ ರಂಗ್ ತಂದವು ಇನ್ನೊಂದು ಮೂಲೆಲಿ ಸಮಾರಂಭದ ಚಿತ್ರರೇಖೆ ಬರಿತಾಯಿದ್ದವು ಕಲಾವಿದ ಕೋಡಿ ಭರತ್‌ನವು.

ಸಾಂಪ್ರದಾಯಿಕ ಉಡುಗೆಲಿ ಹೆಣ್ಮಕ್ಕ ಮನರಂಜನಾ ಸಾಂಸ್ಕೃತಿಕ ಕಾರ್ಯಕ್ರಮ ಕೊಟ್ಟರೆ, ಪಟ್ಟಡ ಶಿವಕುಮಾರ್ ಅವರ ನಿರೂಪಣೆ ಇನ್ನೊಮ್ಮೆ ಅಲ್ಲಿಗೆ ಬನ್ನಿತೇಳುವಂಗಿತ್ತ್. ಪಟ್ಟಡ ರೀನ ದೀಪಕ್ ಇವರೊಟ್ಟಿಗೆ ನಿರೂಪಣೆಲಿ ಕೈ ಜೋಡ್ಸಿದೊ. ಕೊನೆ ಕಾರ್ಯಕ್ರಮ ಅವಂದೂರ್ ಗ್ರಾಮದ ಹುತ್ತರಿ ಜೋಗಿನ ಕೊಣ್ತ ಪೂವಯ್ಯ ತಂಡದ ಸತೀಶ ಮತ್ತೆ ಉಲ್ಲಾಸನವರ್‌ಂದ ನಡ್ತ್.

ಈ ವಿಶೇಷ ಕಾರ್ಯಕ್ರಮಕ್ಕೆ ಕೊಡಗ್‌ಂದ ಹೊರಗೆ ಇರುವ ಅನೇಕ ಬಂದುಗ ಬಂದಿದ್ದೊ. ಅಲ್ಲದೆ ಗೌಡ ಸಮಾಜ ಅಖಿಲ ಗೌಡ ಸಮಾಜ ಯುವ ವೇದಿಕೆ, ಗೌಡ ಮಹಿಳಾ ಒಕ್ಕೂಟದ ಸದಸ್ಯರ್ ಆಲೂರು ಸಿದ್ದಾಪುರದ ದೇವಾಯಿರ ಗಿರೀಶ್ ತಂಡ, ಬೆಂಗ್ಳೂರ್‌ಂದ ಅಮ್ಮಾಜಿರ ಪೊನ್ನಪ್ಪವು, ಮಡಿಕೇರಿ ಆಕಾಶವಾಣಿಂದ ಸುಬ್ರಾಯ ಸಂಪಾಜೆ, ಶಾರದಾ ನಂಜಪ್ಪ ಇವು ಆಗಮಿಸಿ ಸಮಾರಂಭಕ್ಕೆ ಮೆರಗು ಕೊಟ್ಟೊ. ಶಕ್ತಿಪತ್ರಿಕೆ ಕುಡೆಕಲ್ ಸಂತೋಷ್, ವಿಜಯ ಕರ್ನಾಟಕ ಪತ್ರಿಕೆ ಪೊನ್ನೆಟಿ ಸುನಿಲ್ ಇವು ಹಾಜರಿದ್ದ್ ಪತ್ರಿಕಾ ಪ್ರಚಾರ ಕೊಟ್ಟೊ. ಈ ಊರ್‌ಲಿ ಅಕಾಡೆಮಿನ ಎರ್‌ಡನೆ ತಂಡ 2016ರ್‌ಕಲು ಕೊಲ್ಯದ ಗಿರೀಶ್‌ನವರ ಮುಂದಾಳತ್ವಲಿ ಮಳೆಗಾಲ ಕೆಸರ್‌ಗದ್ದೆಲಿ ಆಟ ಹೂಡ್ದು ನಾಟಿ ಅಗೆ ಸ್ಪರ್ಧೆ, ಬಾಣಂತಿಮದ್ದ್, ಹಣ್ಣ್, ಹೂಗಳ ಪ್ರದರ್ಶನ ಅದ್ಬುತಾಗಿತ್ತ್.

ಇಲ್ಲಿ 1920ರ್‌ಲಿ ಹುಟ್ಟಿದ ದವಸ ಭಂಡಾರವುಟ್ಟು. ಇದ್ ಈ ಸಲ ಶತಮಾನೋತ್ಸವ ಆಚರಿಸಿಕಂಡದೆ. ಗೋಪಾಲಕೃಷ್ಣ ಯುವಕ ಸಂಘದವು ಕ್ರೀಡಾಕೂಟಲಿ ಮುಂದೆಯಿದ್ದ್ ಪ್ರತಿ ವರ್ಷ ಪ್ರಶಸ್ತಿಗಳ್‌ನ ತಕಂಡವೆ.

ಇಲ್ಲಿನ ಪ್ರಮುಖ ಬೆಳೆ ಭತ್ತ, ಕಾಫಿ, ಯಾಲಕ್ಕಿ, ಮೆಣ್ಸ್, ಕಿತ್ತುಳಿ, ನಿಂಬೆ. ಬಾಳೆ, ಜೇನಿಗೂ ಹೆಸರಾದರೂ ಕಟ್ಟೆ ರ‍್ವಾಗ ಬಂದ್ ಜನ ಬಡವಾಗೊಳೊ. ಈಗ ದನ, ಹಂದಿ, ಕೋಳಿ, ಮೀನ್ ಸಾಕಾಣಿಕೆಲಿ ಸರಕಾರದ ಸೌಲಭ್ಯನ ಪಡ್ಕಂಡೊಳೊ. ಇಲ್ಲಿನ ಹೆಣ್ಮಕ್ಕ ಸೋಬಾನೆ ಹಾಡ್‌ನ ಆಕಾಶವಾಣಿಲಿ ಹಾಡ್ಯೊಳೊ. ಸರದಿ ಸಾಲ್‌ಲಿ ನಿತ್ತ್ ಶಿಸ್ತ್‌ನ ಪಾಲ್ಸುದು ಇಲ್ಲಿನ ನಿಯಮ.

ಸರ್ಕಾರಿ ಶಾಲೆ, ಅಂಗನವಾಡಿ ಕೇಂದ್ರವುಟ್ಟು. ಸರಕಾರಿ ಬಸ್ ಸೌಲಭ್ಯ ಇದ್ದ್, ನಮ್ಮ ಗ್ರಾಮ ನಮ್ಮ ರಸ್ತೆವುಟ್ಟು. ಜಲಾನಯನ ಸಂಘವುಟ್ಟು. ಚೌಂಡಿ ಸಾರ್ಥಾವು ನೆಲೆ ಹೊಂದಿದ ಅವಂದೂರು ಗ್ರಾಮದ ಪಟ್ಟಡ ಐನ್‌ಮನೆ ಆವರಣಲಿ ಊರವು ಸೇರಿ ನಡ್ಸಿದ ಕಾರ್ಯಕ್ರಮ ಅಲಂಕಾರ ಸಮಿತಿ, ಪ್ರಚಾರ ಸಮಿತಿ ಇವರೆಲ್ಲರ ಶ್ರಮ ಪಲದಾಯಕ ಆತ್. ಇದೇ ತರ ಬ್ಯಾರೆವು ಸನ ಮುಂದೆ ಬಂದರೆ ಎಸ್ಟ್ ಲಾಯ್ಕಾದೆ. ಇದರ ಶ್ರಮದ ಫಲ ಅರೆಭಾಷೆ ಅಕಾಡೆಮಿಂದ 2017 ರ್‌ಲಿ ಗೌರವ ಪ್ರಶಸ್ತಿ ಪಡ್‌ಕಂಡ ಪಟ್ಟಡ ಪ್ರಭಾಕರನವುಕೂ, ಸಮಿತಿ ಸದಸ್ಯರಿಗೂ ಸಲ್ಲೊಕು. ಈ ಕಾರ್ಯಕ್ರಮನ ರೂಪ್‌ಸಿಕೆ ಅಧ್ಯಕ್ಷರಾದ ಲಕ್ಷ್ಮಿನಾರಾಯಣ ಕಜೆಗದ್ದೆನವ್‌ರ ಆಸಕ್ತಿ, ಚೊಕ್ಕಾಡಿ ಪ್ರೇಮ, ಬೈತಡ್ಕ ಜಾನಕಿ ಇವು ಸಂಚಾಲಕರಾಗಿ ಕಾರ್ಯ ನಿರ್ವಹಿಸಿದೊ. ಧನಂಜಯವರ ಸಹಕಾರ ಮತ್ತೆ ವಂದನಾರ್ಪಣೆ ಮನ ಮುಟ್ಟುವಂತಿತ್ತ್. ಸ್ಮಿತಾ ಅಮೃತರಾಜ್, ಕುಯಿಂತೋಡು ದಾಮೋದರ ಇವು ಸಹ ಹಾಜರಿದ್ದೊ. ಸಭೆ ಹೊತಾರೆ 9 ಗಂಟೆಂದ ಮಧ್ಯಾಹ್ನ ಊಟ ಮುಗ್‌ಸಿ ನಾಕ್ ಗಂಟೆಗೆ ಎಲ್ಲವೂ ದೊಡ್ಡಮನೆ ಆವರಣನ ಬಿಟ್ಟ್‌ಕೊಟ್ಟ್ ಮತ್ತೊಮ್ಮೆ ಎಲ್ಲವುಕೂ ಧನ್ಯವಾದ ಅರ್ಪಿಸಿದೊ. ಇದ್ ಎಲ್ಲವರ ಮನ್ಸ್‌ಲಿ ಹಸ್‌ರಾಗಿ ನಿತ್ತುಟು.

**✍ ಬೈತಡ್ಕ ಜಾನಕಿ ಬೆಳ್ಯಪ್ಪ**

ಚಿಂತನೆ

# ನಮನಃ

'ಹೆಣ್ಣ್ ಸಂಸಾರದ ಕಣ್ಣ್' -ಎಂಥ ಅರ್ಥಗರ್ಭಿತದ ಮಾತ್ ಅಲ್ಲಾ? ಇನ್ನೂ ಹೆಚ್ಚ್ ಹೇಳ್ರೆ ಹೆಣ್ಣ್ ಒಂದು ಸಂಸಾರದ, ಹಂಗೆನೇ ದಾಂಪತ್ಯದ ಸಾರಥಿ, ಮನೆನ ತಳಕ್-ಬೆಳಕ್, ದಾರಿದೀಪ, ಚೇತನ, ಚೈತನ್ಯ, ಪ್ರೀತಿನ ಸಾಗರ, ಹಿಂಗೆ ಹತ್ತಾರ್ ತರಲಿ ದೊಡ್ಡ-ದೊಡ್ಡ ಮಾನ್‌ಭಾವರೇ ಹೇಳಿಯೊಳೊ.

ಹಂಗೆನೇ ಹೆಣ್ಣ್ ದೇವತೆಗೆ ಸಮಾನಾಂತ ಕೂಡ ಹೇಳಿಯೊಳೊ. ಇಂಥ ಒಂದು ಹೆಣ್ಣ್ ಕಣ್ಮರೆಯಾದರೆ ಅವ್ಳ ಗಂಡ ಮತ್ತೆ ಮಕ್ಕ-ಮರಿಗಳ ದುಃಖ ಹೇಳಿಕೆ ಬೊತ್ತ್. ಇದ್ ಸಾಮಾನ್ಯಾಗಿ ಎಲ್ಲಾ ಸಂಸಾರಗಳ್ಲಿ ಇರ್ವಂತ ವಿಷಯ ಏನೋ ಸರಿ. ಎಲ್ಲವೂ ಕಣ್ಣೀರ್ ಹಾಕಿವೆ. ಹಂಗೂ ಕೆಲವೊಂದು ಸಂಸಾರಗಳ್ಲಿ ಮೊಸಳೆ ಕಣ್ಣೀರ್ ಹಾಕುದು ಉಟ್ಟೇ-ಉಟ್ಟುಂತೇಳ್ರೆ ನೀವ್ ಒಪ್ಪಿಕಂಡಿಯರಿ ತಾನೆ?



ಈ ಬಿನ್ನ ವರ್ತನೆ ಯಾವ್ದ್‌ರ ಮೇಲೆ ಹೊಂದಿ ಕೊಂಡುಟ್ಟುಂತೇಳ್ರೆ, ಒಂದು ಹೆಣ್ಣ್‌ನ ಘನತೆ, ಗೌರವ, ಅವ್ಳ ಆಚಾರ-ವಿಚಾರ, ರೀತಿ-ನೀತಿ, ನಡೆ-ನುಡಿ, ಅಲ್ಲದೆ, ಆಕೆಗೆ ತನ್ನ ಸಂಸಾರದ ಮೇಲೆ ಇದ್ದ ಪ್ರೀತಿ, ವಿಶ್ವಾಸ, ಸಂಸಾರನ ನಡ್ಸಿಕಂಡ್ ಬಂದ್ ಮಟ್ಟ ಹಿಂಗೆ ಅನೇಕ ವಿಚಾರಗಳ ಮೇಲೆ ಹೊಂದಿಕಂಡಿದ್ದದೆ. ಅದೇನೇ ಇರ್‌ಲಿ-ಹೆಣ್ಣ್-ಹೆಣ್ಣೇ. ಹೆಚ್ಚಿನ ಹೆಣ್ಣ್‌ಗಳೆಲ್ಲಾ ಸಂಸಾರದ ಕಣ್ಣೇ.

ಈ ನನ್ನ ಸಣ್ಣ ಲೇಖನ್ಲಿ ನನ್ನ ಮನ್ಸ್‌ನ ಅಂಥರಾಳಂದ ಬಂದ ಒಂದೆರ್ಡ್ ಮಾತ್ ಏನೆಂದ್ರೆ - ಎಂದೂ ಸರಿಯಾದ ಕಾರ್ಣ ಇಲ್ಲದೆ ಗಂಡಸರ್ ಅವರ ಹೆಣ್ಣ್‌ನ ಮೇಲೆ ಅಧಿಕಾರಿ / ಧರ್ಪ ತೋರ್ರುದು ಸರಿಯಲ್ಲ. ಗಂಡನಾದಂವ ಅವ ಅಭಿಪ್ರಾಯಲಿ ಹೆಣ್ಣ್ ತಿಳಿಯದೆ ತಪ್ಪ್ ಮಾಡ್ರೆ ಅದ್ನ ಸರಿಯಾಗಿ ತಿಳ್‌ಕಂಡ್ ಸರಿದಾರಿಗೆ ಎಳ್ಕಂಡ್ ಬಾದೇ ಅವ್ನ ನಿಜವಾದ ಗಂಡ್‌ಸ್ಥಾನ. ಅದ್ ಬುಟ್ಟ್

ನನ್ನ ರಟ್ಟೆ ಗಟ್ಟಿ ಉಟ್ಟೊಂತೇಳಿ ವರ್ತಿಸುದು ಎಂದೂ ಸರಿಯಲ್ಲ ತಾನೆ? ನೀವೇನ್ ಹೇಳಿಯರಿ? ಗಂಡನಾಗಲೀ, ಗಂಡಸರಾಗಲೀ ಯಾರೂ ತಪ್ಪೇ ಮಾಡ್ದುಲೆನಾ? ಅವು ಒಮ್ಮೊಮ್ಮೆ ಹೆಂಗಸರಿಗಿಂಗ ಹೆಚ್ಚ್ ತಪ್ಪ್ ಮಾಡ್‌ವೆಂತೇಳ್ರೆ ಗಂಡಸರ್ ಒಪ್ಪಿಕಂಡ್ರೆ ಅವ್ಕೆ ಮರ್ಯಾದಿ. ಇಲ್ಲೆ, ಇನ್ನ್ ಹಂಜ ಸಮಯಲೇ ಹೆಣ್ಣ್ ಗಂಡನ ಮೇಲೆ ಕುದುರೆ ಸವಾರಿ ಮಾಡಿ ಬುಟ್ಟದೆ ನೋಡಿ. "ಹೆಣ್ಣ್ ಒಲಿದರೆ ನಾರಿ ಮುನಿದರೆ ಮಾರಿ". ಗೊತ್ತುಟ್ಟಲ್ಲಾ?

ಗಂಡನಾದಂವ ತನ್ನ ಹೆಣ್ಣ್‌ನ ಸಾಕಿ-ಸಲಹುದ್ ಅವನ ಧರ್ಮ. ಏಕೆಂತೇಳ್ರೆ ನೋಡಿ, ಒಂದ್ ಗೂಡೆ ಅವ್ಳ ಅಪ್ಪ-ಅವ್ವ, ಅಣ್ಣ-ತಮ್ಮ, ಅಕ್ಕ-ತಂಗಿ, ಅತ್ತಿಗೆ-ನಾದಿನಿ, ಬಂಧು-ಬಳಗ ಎಲ್ಲಾರ್‍ನ ಬುಟ್ಟ್ ಗಂಡನ ಕೈ ಹಿಡ್ದದೆ ಅಲ್ಲಾ? ಹಿಂಗೆ ಮನೆ ಬಿಟ್ಟ್ ಬಾಕನ ಅವ್ಳ ಮನಸ್ಸ್ ಎಷ್ಟ್ ನೋವಿದ್ದದೆ ಅಂತ ತಿಳ್ಕನಿ. ಗಂಡ ನನ್ನನ್ನ ಕಾಪಾಡಿಕಂಡ್, ಬೆಳ್‌ಸಿಕಂಡ್ ಬಂದದೇಂತ ಆನೆಭಾರದ ಆಸೆನ ಹೊತ್ತ್ ಬಂದದೆ ಅಲ್ಲಾ? ಹಿಂಗಿರ್‌ಕಾಕನ ಅವ್ಳ್‌ಗೆ ನೋವ್ ಕೊಟ್ಟರೆ ಧರ್ಮನಾ? ನೀಮೊಮ್ಮೆ ಹೇಳಿ? ಅಂದ್ರೆ ಎಲ್ಲಾ ಗಂಡಂದಿರ್ -ಗಂಡಸರ್ ಯಾರೂ ಸರಿಯಾಗಿ ನೋಡಿಕೊಂಬದ್‌ಲೇಂತ ಅರ್ಥ ಅಲ್ಲ. ಎಷ್ಟೋ ಜನ ಒಳ್ಳೆವೂ ಒಳೊ. ಇದ್ ಸತ-ಸತ್ಯ.

ಈ ನನ್ನ ಲೇಖನದ ಮುಖ್ಯ ಗುರಿಗೆ ಬಂದರೆ, ನಾನೇಕೆ ಈ 'ನಮನ' ಬರ್‍ದೊಳೆಂತಾ? ನನ್ನ ಪ್ರೀತಿಯ, ಗೌರ್‍ವಾನಿತ, ಘನತೆಯ, ಒಳ್ಳೆಯ ಆಚಾರ-ವಿಚಾರಗಳ, ಒಳ್ಳೆ ನಡವಳಿಕೆಗಳ, ನಯ-ವಿನಯಗಳ, ಪ್ರೀತಿ ವಾತ್ಸಲ್ಯಗಳ ಹೆಣ್ಣ್ ನನ್ನಿಂದ, ನನ್ನ ಸಂಸಾರಂದ ಕಣ್ಮರೆಯಾಕಾಕನ ಅವ್ಳ ನಾನ್ ವರ್ಷಗಳ ನೋವ್‌ಗಳ ನೋಡಿ-ನೋಡಿ ನಮ್ಮೆಲ್ಲರ ಮನ್ಸ್‌ಗೆ ಆದ ದುಃಖ ಅದೆಷ್ಟೆಂತ ನಂಗೆ ಹೇಳಿಕೆ ಆಕೇಲೆ. ಇಂಥ ಬೇನೆ ಎಲ್ಲಾ ಸಂಸಾರಕ್ಕೂ ಬಂದದೆಂತ ಹೇಳ್ದ್ ಸತ-ಸತ್ಯ. ಆದ್ರೆ ವ್ಯತ್ಯಾಸ ಇದ್ದೇ ಇದ್ದದೆ. ನಾನ್ ಮೊದ್ಲೇ ಬರ್‍ದೊಳೆ.

ಹಿಂಗಿರ್‌ಕಾಕನ ಅಷ್ಟ್ ಬೇಗ ಅಂಥವ್ಳನ ಮರೆಯಕ್ಕೆ ಸಾಧ್ಯ ಉಟ್ಟಾ? ಅಂಥ ಒಂದ್ ಹೆಣ್ಣ್ ಮನೆಲಿ ಈಗ ಇಲ್ಲೆಂತ ಆದ್ರೆ ಆ ಮನೆ ಯಾವ ಸ್ಥಿತಿಗೆ ಬಂದದೆ, ಅಲ್ಲಿ ಏನೆಲ್ಲಾ ಕಳ್ಕಂಡ್ ಖಾಲಿ-ಖಾಲಿ ಆಗಿದ್ದದೆ ಅಂತ ನನ್ನ ಕವ್ನಲಿ ಬರ್‍ದ್ ನಿಮ್ಮ ಮನ್ಸ್‌ಗೆ ತಾದೇ ನನ್ನ ಮುಖ್ಯ ಉದ್ದೇಶ. ಅಲ್ಲದೆ, ಅಂಥವ್‌ಳ್ನ ಸ್ಮರ್‍ಸಿಕೊಂಡಿದ್ದರೆ, ಅದ್ ನಿಮ್ಗೆ ಸದಾ ಸ್ಫೂರ್ತಿ ಕೊಡ್‌ತಾ ಇದ್ದ್, ನಿಮ್ಮ ಮುಂದೆನ ನೊಂದ ಜೀವನ್ಕೊಂದಿಷ್ಟ್ ಶಾಂತಿ-ಸಮದಾನ, ನೆಮ್ಮದಿ ಕೊಟ್ಟ್ ಕಾಪಾಡ್‌ದೇಂತ ನನ್ನ ದೃಢ ನಂಬಿಕೆ. ನೀವ್ ನಮಿಸಿಕಂಡರೆ ಆಕೆಗೂ ನಿಮ್ಮ ಮೇಲೆ ಪ್ರೀತಿ ಉಳ್ಕಂಡದೆ ತಾನೆ.

**✍ ಕಾವೇರಿಮನೆ ಡಾ॥ ಬೋಜಪ್ಪ**

ಆರೋಗ್ಯ

# ಯೋಗ ಒಂದ್ ಜೀವನ ಕ್ರಮ

**ಯೋಗ :**

ಶರೀರನ ಹಿಂದಕ್ಕೆ ವಾಲಿಸಿ, ಮುಂದಕ್ಕೆ ಬಗ್ಗಿಸಿ, ಎಡ-ಬಲ ತಿರ್ಗಿಸಿ ಸುಸ್ತ್ ಮಾಡಿಕಂಬದ್ ಯೋಗ ಅಲ್ಲ! ಕೆಲ್ಸ ಕಾರ್ಯನ ಬುಟ್ಟ್ ಕಣ್ ಮುಚ್ಚಿಕಂಡ್ ಕುದ್ಕಂಬದ್ ಧ್ಯಾನ ಅಲ್ಲ! ಯೋಗ, ಧ್ಯಾನ ತೇಳಿರೆ ಅದೊಂದ್ ಜೀವನ ಕ್ರಮ ಅಷ್ಟೆ!

**ಯೋಗ-ಸಾಮಾನ್ಯ ತಿಳುವಳಿಕೆ :**

ಯೋಗ ನಮ್ಮ ದೇಶಲಿ ಸಾವಿರಾರ್ ವರ್ಷಗಳ್‌ಂದ ಇದ್ದರೂ, ನಮ್ಮ ದೇಶದವೇ ಯೋಗ ಮಾಡುದು ಕಮ್ಮಿ! ಮುಂದಕ್ಕೆ ಬಗ್ಗುದು, ಹಿಂದಕ್ಕೆ ವಾಲುದು, ಕೈ ಮೇಲೆ ಎತ್ತುದು, ಕಾಲ್ ನೀಡುದು ಈ ಸರ್ಕಸ್ ನಮ್ಗೆ ಅಲ್ಲ, ಇದೆಲ್ಲಾ ಯೋಗ ಪಟುಗಳ್ಗೆ ಮಾತ್ರ ಸರಿಂತ ಹೆಚ್ಚಿನ ಜನಗಳ ಅಬಿಪ್ರಾಯ! ಕೆಲವ್ ಜನಗ ನಾವೆಲ್ಲ ಗದ್ದೆಲಿ, ಕಾಪಿ ತೋಟಲಿ ಕೆಲ್ಸ ಮಾಡುವೆ, ನಡ್ದವೆ, ಮನೆ ಕೆಲ್ಸ ಮಾಡ್ವೆ, ನಮ್ಗೆಲ್ಲ ಯೋಗ ಬೇಕಾಗಿಲ್ಲೆ, ಅದೆಲ್ಲಾ ಟವ್ನ್‌ಲಿ ಕುದ್ಕಂಡ್ ಇರವ್ಕೆ ಲಾಯ್ಕ್‌ಂತ ಹೇಳ್ವೆ!



**ಯೋಗ ಮನ್ಸ್‌ದ್ ತಿಳುವಳಿಕೆ :**

ಉಂಬದು, ಕುಡಿಯದು, ಬಟ್ಟೆಹಾಕುದು, ನಿದ್ದೆಮಾಡ್ದು, ಹೊರ್ಕಡೆ ಹೋದು, ಮೀಯದು, ದೇವ್ರ್‌ಗೆ ಕೈ ಮುಗಿಯೊದು, ಮದ್ವೆ-ಸಂಸಾರ, ಮನೆ-ಮಠ ಎಷ್ಟ್ ಮುಖ್ಯನೊ, ಯೋಗ ಜೀವನ ಅಷ್ಟೇ ಮುಖ್ಯ! ತರ್ಕಾರಿ, ನೀರುಳ್ಳಿ, ಅರ್‌ಶಿಣ, ಮೆಣ್ಸ್ ಹೊಡಿ, ಸಂಬಾರ ಹೊಡಿ, ಉಪ್ಪು, ಹುಳಿ ಇದ್ದರೆ ಒಂದ್ ಗೈಪು ಆದೆ, ಅದೇ ತರ ಬದ್ಕ್‌ಲಿ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ ಇದ್ದರೆ ಸಮಾದಿ ಆದೆ. ಸಮಾದಿ ತೇಳಿರೆ ಗೋರಿ ಅಲ್ಲ! ಅದ್ ಮನ್ಸ್‌ದ್ ತಿಳುವಳಿಕೆ. ಅಂದರೆ ಬದ್ಕ್‌ಲಿ ಒಳ್ಳ ಸಂಸ್ಕಾರನ ಪಡಿಯುವ ತಿಳುವಳಿಕೆ.

**ಆಸನ - ಪ್ರಾಣಾಯಾಮ :**

ವ್ಯಾಯಾಮ ಮಾಡ್ದುನ ಯೋಗಲಿ ಆಸನಾಂತ ಕರ್ದವೆ. ವ್ಯಾಯಾಮ ಮಾಡಿಕನ ನಿದಾನಲಿ, ಒಂದ್ ಕ್ರಮಲಿ, ಉಸಿರಾಡುದೇ ಪ್ರಾಣಾಯಾಮ.

ವ್ಯಾಯಾಮ, ಪ್ರಾಣಯಾಮ ಮಾಡಿರೆ ನಮ್ಮ ಸರೀರಲಿ ಇರುವ ಇಡಾ, ಪಿಂಗಳ, ಸುಶುಮ್ನಾ ನಾಡಿಗ ಲಾಯ್ಕಾಗಿ ಕೆಲ್ಸ ಮಾಡಿ ಪ್ರಾಣಶಕ್ತಿ ಮತ್ತೆ ಬುದ್ದಿಶಕ್ತಿನ ಸಮೃದ್ಧಿ ಮಾಡುವೆ. ನಮ್ಮ ಸರೀರ ಮಣ್ಣ್, ನೀರ್, ಬೆಂಕಿ, ಗಾಳಿ, ಆಕಾಸ ಈ ಪಂಚಭೂತಗಳ್‌ಂದ ಆಗಿದ್ದದೆ. ಪಂಚಭೂತಗ ಅಣು-ಪರಮಾಣುಗಳ್‌ಂದ



ಆದವೆ. ಅಣು-ಪರಮಾಣುಗ ಆಕಾಸಂದ ಆದವೆ. ಆಕಾಸತೇಳಿರೆ ಖಾಲಿ ಜಾಗ ಅಲ್ಲ! ಅದ್ ದೈವ ಕಣಗಳ ರಾಸಿ! ಅಣುಗ ಯಾಗೋಳ್ ಸುತ್ತುತ್ತಾ ಇದ್ದವೆ. ಅಣುಗ ಸುತ್ತಿಕನ ಚೈತನ್ಯ ಶಕ್ತಿ ಹುಟ್ಟಿದೆ. ನಮ್ಮ ಸರೀರಲಿ ರಕ್ತ, ಉಷ್ಣ, ಗಾಳಿ, ಪ್ರಾಣಶಕ್ತಿ, ಚೈತನ್ಯ ಶಕ್ತಿ ಒಂದ್ ಕ್ರಮಲಿ ಹರೀತಾ ಇದ್ದವೆ. ನಮ್ಮ ಅವಸರದ ಜೀವನ ಕ್ರಮಂದ ಒಂದೊಂದ್ ಸಲ ಕ್ರಮ ತಪ್ಪಿ ಹೋಗಿ ನಮ್ಗೆ ಉಸಾರಿಲ್ಲದೆ ಆದೆ. ನಾವು ವ್ಯಾಯಾಮ ಮಾಡಿಕನ ರಕ್ತ, ಉಷ್ಣ, ಗಾಳಿ ಸರೀರಕ್ಕೆ ಬೇಕಾದ ಪ್ರಮಾಣಲಿ ಹಂಚಿಕೆಯಾಗಿ ನಾವು ಯಾಗೋಳು ಆರೋಗ್ಯವಂತರಾಗಿದ್ದವೆ. ಪ್ರಾಣಶಕ್ತಿ ಹೆಚ್ಚಾಗಿ ಸರೀರಕ್ಕೆ ಒಳ್ಳೆ ತ್ರಾಣ ಬಂದದೆ. ಚೈತನ್ಯ ಶಕ್ತಿ ರಭಸ ಆಗಿ ಮನ್ಸ್‌ಗೆ ಇಚ್ಛಾಶಕ್ತಿ ಬಂದದೆ.

**ಪ್ರತ್ಯಾಹಾರ :**

ರೂಪ, ರಸ, ಗಂದ, ಸದ್, ಸ್ಪರ್ಶ ತೇಳುವ ಐದ್ ಪಂಚತನ್ಮಾತ್ರಗ ಕಣ್, ಕಿಮಿ, ಮೂಗ್, ನಾಲ್ಗೆ, ಚಕ್ಕಳ ಈ ಐದ್ ಪಂಚೇದ್ರಿಯಗಳ್ಲಿ ಆಸೆನ ಹುಟ್ಟುಸುವೆ. ಚಕ್ಕಳಕ್ಕೆ ಬೆಚ್ಚಂಗಿರುವ ಆಸೆ, ನಾಲಿಗೆಗೆ ರಸ ರಸ ತಿನ್ನುವ ಆಸೆ, ಮೂಗುಗೆ ಗಮ ಗಮ ಮೂಸುವ ಆಸೆ, ಕಿಮಿಗೆ ರಾಗನ ಕೇಳುವ ಆಸೆ. ಕಣ್ಣ್‌ಗೆ ಕಲರ್ ಕಲರ್ ನೋಡುವ ಆಸೆ, ಈ ಆಸೆಗಳ್ನ ತೀರ್‍ಸಿಕಣಿಕನ ನಮ್ಗೆ ಆಗಲಿ ಬೇರೆ ಯಾರಿಗೇ ಆಗಲಿ, ಇಂದ್ ಆಗಲಿ ಮುಂದಕ್ಕೆ ಆಗಲಿ, ಸರೀರಕಾಗಲಿ, ಮನ್ಸ್‌ಗಾಗಲಿ ಬೇನೆ ಆಕಾಗದ್! ಮುಟ್ಟುದು, ಮೂಸುದು, ತಿಂಬದು, ಕೇಳ್ದು, ನೋಡ್ದು, ಈ ಆಸೆಗಳ್ನ ನೀತಿಮಾರ್ಗಂದ ಒಂದ್ ಮಿತಿಲಿ ತೀರ್‍ಸಿಕಣೆಕೆ ಪಂಚೇಂದ್ರಿಯನ ಪಳ್ಗುಸುವ ಅಭ್ಯಾಸನೇ ಪ್ರತ್ಯಾಹಾರ!

**ಧಾರಣ :**

ತಿಳ್ದವ್ ಒಂದ್ ಮಾತ್ ಹೇಳ್ವೆ "ವರ್ತಮಾನಲಿ ಬದ್ಕಿಂತ" ಇದರ ಅರ್ಥ-ನೆನ್ನೆ ಆಗಿ ಹೋದ ಸಂಗತಿಗಳ್‌ನ ಚಿಂತೆ ಮಾಡದೆ, ನಾಳೆಗೆ ಹೆದ್ರದೆ, ಚಿಂತನ ಮಾಡುವ ಅಭ್ಯಾಸನ ಬೆಳ್ಸಿಕಂಡ್, ಇಂದ್, ಈಗ ಏನ್ ಕೆಲ್ಸ

ಮಾಡ್ತಾವೋಳೊ ಅದರ ಮೇಲೆ ಪೂರ್ತಿ ಮನ್ಸ್ ಮಡ್ಗಿ ಕೆಲ್ಸ ಮಾಡುದು ಧಾರಣ. ಕೆಲ್ಸ ಒಂದ್ ಕಡೆ, ಮನ್ಸ್ ಇನ್ನೊಂದ್ ಕಡೆ ಇರಿಕ್ಕೆ ಬತ್!

**ಧ್ಯಾನ :**

ನಾವು ಕೆಲ್ಸ ಮಾಡಿಕಂಡಿರಿಕನ ನಮ್ಮ ಸರೀರದ ಜೊತೆ ಮನ್ಸ್ ಆಲೋಚನೆ ಮಾಡ್ತಾ ಇದ್ದದೆ. ಆಗ ಮನ್ಸ್‌ಲಿ ಆಲೋಚನೆಯ ತರಂಗಗ ಎದ್ ಅವ್ ಸುರುಳಿಯಾಗಿ ಸುತ್ತುತ್ತಾ ಇದ್ದವೆ. ಆ ತರಂಗಗಳ ಸುತ್ತುವ ಸಂಖ್ಯೆಗ ನಮ್ಮ ಕೆಲ್ಸ ಮತ್ತೆ ಆಲೋಚನೆಗೆ ಸರಿಯಾದ ಪ್ರಮಾಣಲಿ ಇದ್ದವೆ. ಕೆಲ್ಸ ಒಂದ್ ಕಡೆ ಮನ್ಸ್ ಇನ್ನೊಂದ್ ಕಡೆ ಇರ್ಕನ ತರಂಗ ಒಂದ್ ಸೆಕೆಂಡ್‌ಗೆ ಹದ್ನಾಕರ್‌ಂದ ನಲ್ವತ್ ಸುತ್ ಸುತ್ತಿದೆ. ಇದ್ಕೆ "ಬೀಟ ತರಂಗ" ತ ಹೇಳ್ವೆ. ಒಂದ್ ಕೆಲ್ಸದ ಮೇಲೆ ಪೂರ್ತಿ ಗ್ಯಾನ ಮಡ್ಗಿ ಮಾಡುವ ಅಭ್ಯಾಸನ ಬೆಳ್ಸಿಕಂಡಗೆಲ್ಲಾ ತರಂಗಗಳ ಸುತ್ತುವ ಸಂಖ್ಯೆ ಕಮ್ಮಿ ಆಗ್ತಾ ಇದ್ದದೆ. ತರಂಗಗಳ ಸುತ್ತುವ ಸಂಖ್ಯೆ ಕಮ್ಮಿ ಆದಷ್ಟ್ ಮನ್ಸ್‌ದ್ ಚಂಚಲ ಕಮ್ಮಿ ಆಗ್ತಾ ಇದ್ದದೆ. ಚಂಚಲ ಕಮ್ಮಿಯಾದಂಗೆ ಮನ್ಸ್ ತಿಳಿಯಾದೆ. ಏಳರ್‌ಂದ ಹದಿಮೂರ್ ಸುತ್ ಸುತ್ತಿರೆ ಅದ್ಕೆ "ಆಲ್ಫಾ ತರಂಗ" ತ ಹೇಳುವೆ. ನಾಲ್ಕರ್‌ಂದ ಆರ್ ಸುತ್ ಸುತ್ತಿರೆ ಅದ್ಕೆ "ತೀಟ ತರಂಗ" ತ ಹೇಳುವೆ. ಒಂದರ್‌ಂದ ಮೂರ್ ಸುತ್ ಸುತ್ತಿರೆ ಅದ್ಕೆ "ಡೆಲ್ಟಾ ತರಂಗ"ತ ಹೇಳುವೆ. ಮನ್ಸ್‌ದ್ ಆಲೋಚನೆಯ ತರಂಗಗ ಸುತ್ತುವ ಸಂಖ್ಯೆನ ಕಮ್ಮಿ ಮಾಡುವಂಗೆ ಕೆಲ್ಸ ಮಾಡುವ ಕ್ರಮನೇ ಧ್ಯಾನ!

**ಸಮಾಧಿ :**

ನಾವು ಮಾಡುವ ಪ್ರತಿಯೊಂದ್ ಕೆಲ್ಸಗಳ ಮೇಲೆ ಪೂರ್ತಿ ಗ್ಯಾನ ಮಡ್ಗಿ ಕೆಲ್ಸಗಳ್ನ ಲಾಯ್ಕಾಗಿ ಮಾಡಿ ತೀರ್ಸುವ ಅಭ್ಯಾಸ ಮಾಡಿಕಂಡರೆ ಕಡೆಗೆ ಮನ್ಸ್‌ದ್ ಆಲೋಚನಾ ತರಂಗ ಡೆಲ್ಟಾ ತರಂಗ ಆದೆ. ಅಂದರೆ ಮನ್ಸ್ ಕನ್ನಡಿ ತರ ತಿಳಿಯಾದೆ. ತಿಳಿಯಾದ ಮನ್ಸೆ ಸಮಾಧಿ!

**ಯಮ ನಿಯಮ :**

ಸಮಾಧಿ ಸ್ಥಿತಿಂದ ತಿಳಿಯಾದ ಮನ್ಸ್‌ಗೆ ಪ್ರಕೃತಿ ನಿಯಮದ ಗುಟ್ಟೆಲ್ಲಾ ಗೊತ್ತಾಗಿ ಬುಟ್ಟದೆ! ಯಾವುದು ತಪ್ಪು ಯಾವುದು ಸರಿತೇಳುವ ತಿಳುವಳಿಕೆ ಬಂದ್ ಮಾಡುವ ಕೆಲ್ಸಗೆಲ್ಲಾ ಒಳ್ಳೆದೇ ಆದವೆ. ಬದ್ಕ್‌ಲಿ ಯಾವ ಯಾವ ತಪ್ಪುಗಳ್ನ ಮಾಡಕ್ಕಾಗದ್ ಮತ್ತೆ ಸರಿಯಾಗಿ ಹೆಂಗೆ ನಡ್ಕಣಕುತೇಳುವ ತಿಳುವಳಿಕೆನ ಕೊಡುದೇ ಯಮ ನಿಯಮ!

**ಸರಳ ಯೋಗ :**

ಈಗನ ಕಾಲಲಿ ಎಲ್ಲವೂ ಅವಸರಲಿಯೇ ಇದ್ದವೆ. ಯಾರಿಗೂ ಬದ್ಕ್‌ಲಿ ಅಷ್ಟಾಂಗ ಯೋಗನ ಅಳವಡಿಸುವ ತಾಳ್ಮೆ ಇರ್ದುಲ್ಲೆ. ಸುಮಾರ್ ಯೋಗ ಗುರುಗ, ಅಷ್ಟಾಂಗ ಯೋಗದ ಅನುಕೂಲ ಪಡ್ಕಣಿಕೆ ಕೆಲವು ಸುಲ್ಬದ ಅಭ್ಯಾಸಗಳ್ನ

ಹೇಳಿ ಕೊಡ್ತಾ ಓಳೊ. ಶ್ರೀ ವೇದಾದ್ರಿ ಮಹರ್ಷಿ, ಆಧ್ಯಾತ್ಮ ಗುರುಗ "ಸರಳ ಕುಂಡಲಿನಿ ಯೋಗ" ಅಭ್ಯಾಸಂದ ಅಷ್ಟಾಂಗ ಯೋಗದ ಅನುಕೂಲ ಪಡಿಯುವ ವ್ಯವಸ್ತೆನ ಮಾಡಿಕೊಟ್ಟೋಳೊ. ಸರೀರದ ಆರೋಗ್ಯಕ್ಕೆ "ಸರಳ ವ್ಯಾಯಾಮ", ಮನ್ಸ್ ತಿಳಿಯಾಕೆ "ಸರಳ ಧ್ಯಾನ" ಮತ್ತೆ "ಆತ್ಮಶುದ್ಧಿ". ಸರೀರಲಿ ತ್ರಾಣ ಜಾಸ್ತಿಯಾಕೆ "ಕಾಯಕಲ್ಪ ಯೋಗ"ನ ಸರಳ ಕುಂಡಲಿನಿ ಯೋಗಲಿ ಅಳವಡಿಸೊಳೊ. ಈ ಯೋಗಲಿ ಆಸನ, ಪ್ರಾಣಯಾಮ, ಧ್ಯಾನ, ಭಂದ, ಮುದ್ರೆ, ಆತ್ಮಶುದ್ಧಿ ಮಾಡುವ ಕ್ರಮನ ತಿಳಿಸಿಕೊಟ್ಟೋಳೊ. ಭಾರತ ದೇಶ ಅಲ್ಲದೆ ಪ್ರಪಂಚದ ಬೇರೆ ಬೇರೆ ಕಡೆ "ಸ್ಕೈ ಮೆಡಿಟೇಶನ್ ಸೆಂಟರ್" ಹೆಸ್ರ್‌ದ್ ಸಂಸ್ಥೆನ ಕಟ್ಟಿ ಅಷ್ಟಾಂಗ ಯೋಗನ ಹೇಳಿ ಕೊಡ್ತಾವೋಳೊ.

**ಕಾಯಕಲ್ಪ ಯೋಗ :**

ನಾವು ಬಾಯೊಳಗೆ ಹಾಕಂಡ ಆಹಾರ ಪದಾರ್ಥಗಳ್‌ನ ಹಲ್ಲು, ಜೆಲ್ಲು, ನಾಲ್ಗೆ ಸೇರಿಕಂಡ್ ಲಾಯ್ಕಾಗಿ ಅರ್ದ್‌ ಹೊಟ್ಟೆಯೊಳಗೆ ಕಳ್ಸಿಬುಟ್ಟವೆ. ಹೊಟ್ಟೆಯೊಳಗೆ ಹೋದ ಆಹಾರ ಪದಾರ್ಥಗ ರಸ, ರಕ್ತ, ಮಾಸ, ಚರ್ಬಿ, ಮೂಳೆ, ಮಜ್ಜೆ, ವೀರ್ಯ ಈ ಸಪ್ತ ಧಾತುಗ ಆದವೆ. ವೀರ್ಯಂದ ಪ್ರಾಣಶಕ್ತಿ ಬಂದದೆ. ಸರೀರಲಿ ಪ್ರಾಣಶಕ್ತಿನ ನಿಭಾಯಿಸಿಕೆ ಮಾಡುವ ಒಂದ್ ವ್ಯಾಯಾಮ "ಕಾಯಕಲ್ಪ ಯೋಗ". ಕಾಯಕಲ್ಪ ಯೋಗದ ಅಭ್ಯಾಸಂದ ನಮ್ಮ ಸರೀರಲಿ ಇರುವ ಮೂಲಾಧಾರ ಚಕ್ರ, ಸ್ವಾಧಿಸ್ಠಾನ ಚಕ್ರ, ಮಣಿಪೂರ ಚಕ್ರ, ಅನಾಹತ ಚಕ್ರ, ವಿಶುದ್ದಿ ಚಕ್ರ, ಆಜ್ಞಾಚಕ್ರ, ಸಹಸ್ರಾರ ಚಕ್ರ ಈ ಏಳ್ ಚಕ್ರಗಳ ಸಾಮರ್ಥ್ಯ ಜಾಸ್ತಿಯಾಗಿ ಸರೀರಕ್ಕೆ ಒಳ್ಳೆ ತ್ರಾಣ ಮತ್ತೆ ಮನ್ಸ್‌ಗೆ ಇಚ್ಛಾಶಕ್ತಿ ಬಂದದೆ. ಹದ್ನಾಲಕ್ ವಯ್ಸ್ ಆದಂಗೆ



ಮಕ್ಕ ಕಾಯಕಲ್ಪ ಯೋಗನ ಕಲ್ತ್ ಅಭ್ಯಾಸ ಮಾಡಿಕೆ ಸುರು ಮಾಡಿರೆ ಅವರ ಸರೀರ ಗಟ್ಟಿಯಾಗಿ ರೋಗ ನಿರೋಧಕ ಶಕ್ತಿ ಹೆಚ್ಚಾದು ಅಲ್ಲದೆ, ಬುದ್ದಿಶಕ್ತಿ ಜಾಸ್ತಿಯಾಗಿ ಮನ್ಸ್‌ನ ಆಲೋಚನೆಗ ಉನ್ನತ ಮಟ್ಟಕ್ಕೆ ಹೋದವೆ!

**ಆತ್ಮಶುದ್ಧಿ :**

ನಾವು ಮಾಡುವ ಪ್ರತಿಯೊಂದ್ ಕೆಲ್ಸ ಮತ್ತೆ ಅದರ ಪರಿಣಾಮ ನಾವ್ ಆಲೋಚನೆ ಮಾಡ್ದಂಗೆ ನಡ್ದದೆ. ಅದ್ಕೆ ನಾವು ನಮ್ಮ ಆಲೋಚನೆನ ವಿಶ್ಲೇಷಣೆ ಮಾಡಿ ಒಳ್ಳ ಪರಿಣಾಮ ಕೊಡುವ ಆಲೋಚನೆನ ಮನ್ಸ್‌ಲಿ ಮಡ್ಕಣಕು. ನಮ್ಮ ಯಾವುದೇ ಆಸೆಗಳಿಗೆ ಇತಿ ಮಿತಿ ರೀತಿ ನೀತಿ ಇದ್ ಯಾರಿಗೂ ತೊಂದರೆ ಆಗದಂಗೆ ನೋಡಿಕಣಕ್ಕು. ಸಿಟ್ಟ್‌ನ ಹತೋಟಿಲಿ ಮಡ್ಕಣಕು, ಬೇಜಾರನ ವಿಶ್ಲೇಷಣೆ ಮಾಡಿ ಪರಿಹಾರ ಮಾಡಿಕಣಕು. ಬದ್ಕ್‌ಲಿ ಇದನೆಲ್ಲಾ ಅಭ್ಯಾಸ ಮಾಡಿಕಂಡರೆ ಆತ್ಮ ಶುದ್ಧಿಯಾದೆ, ಹಂಗೆ ಮನ್ಸ ತನ್ನನ ತಾನ್ ತಿಳ್ಕಂಡ್ ಒಂದ್ ಹೊಸ ಮನ್ಸ ಆಗಿ ಬದ್ಲಾದೆ!

**ಯೋಗ ಡಾಕ್ಟರ್ :**

ಯೋಗ ಮಾಡಿರೆ ಕಾಯಲಗ ವಾಸಿ ಆದೆಂತೇಳುವ ಸಾಮಾನ್ಯ ಅಭಿಪ್ರಾಯ ನಮ್ಮಲ್ಲಿ ಉಟ್ಟು. ಒಂದ್ ಕಾರ್ ಕೆಟ್ಟ್ ಹೋದರೆ ಮೆಕಾನಿಕ್ ರಿಪೇರಿ ಮಾಡ್ದೆ. ಕಾರ್‌ನ ಮನ್ಸ ಮಾಡ್‌ದರ್‌ಂದ ಮೆಕಾನಿಕ್‌ಗೆ ಕಾರ್‌ದ್ ಮೆಕಾನಿಸಮ್ ಎಲ್ಲಾ ಗೊತ್ತಿದ್ದದೆ. ಪ್ರಕೃತಿ ಮಾಡ್ದ ನಮ್ಮ ಸರೀರದ ಪೂರ್ತಿ ಮೆಕಾನಿಸಮ್ ವೈದ್ಯ ಧನ್ವಂತರಿಗಲ್ಲದೆ ಬೇರೆ ಯಾರಿಗೂ ಗೊತ್ಲೆ! ಹಂಗಾಗಿ ಯೋಗಕ್ಕೆ ಕಾಯಲ ಗುಣ ಮಾಡುವ ಶಕ್ತಿ ಇದ್ದರೂ ಯೋಗ ಮಾಡವ್ಕೆಲ್ಲಾ ಅದ್ ಯಾವ ಕಾಯಲಂತ ಪತ್ತೆ ಮಾಡಿಕೆ ಆದುಲೆ. ಕಾಯಲ ಪತ್ತೆ ಆಗದ ಮೇಲೆ ಯಾವ ಆಸನ-ಮುದ್ರೆ ಹಾಕುದು? ಒಳ್ಳ ಗುರುಗಳ ಕೈಂದ ಯೋಗ ಕಲ್ತ್ ಅಭ್ಯಾಸ ಮಾಡಿರೆ, ನಮ್ಮ ಜೀವನ ಕ್ರಮಂದ ಬರುವ ಕಾಯಲನ ಸಲ್ಪ ಮಟ್ಟಿಗೆ ಮುಂದಕ್ಕೆ ಹಾಕ್ ಅಷ್ಟೆ!

**ಹೊಂದಾಣಿಕೆದ್ ಬದ್ಕ್ :**

ಮೀಯದುರ್‌ಂದ ಸರೀರ ಮನ್ಸ್ ಹೆಂಗೆ ಚಟುವಟಿಕೆಂದ ಇದ್ದದೆಯೊ ಹಂಗೆ ಯೋಗ ಅಭ್ಯಾಸಂದ ಸರೀರ ಮನ್ಸ್ ಚಟುವಟಿಕೆಂದ ಇದ್ದದೆ. ಯಮ-ನಿಯಮಂದ ಒಳ್ಳೆದ್ ಯಾವುದ್, ಕೆಟ್ಟದ್ ಯಾವುದುತೇಳುವ ತಿಳುವಳಿಕೆ ಬಂದ್ ನಮ್ಮ ಕೈಂದ ಯಾಗೋಳ್ ಒಳ್ಳೆ ಕೆಲ್ಸಗಳೇ ಆದವೆ. ಆಸನ-ಪ್ರಾಣಾಯಾಮಂದ ಸರೀರ ಮನ್ಸ್ ಬಲ ಆದವೆ. ಪ್ರತ್ಯಾಹಾರಂದ ಮನ್ಸ್ ತನ್ನಲ್ಲಿರುವ ಎಲ್ಲಾ ಆಸೆಗಳ್ನ ಸಂಯಮಂದ ಪೂರೈಸಿಕಂಡದೆ. ವಸ್ತುಗಳ್‌ಂದ ಸಿಕ್ಕುವ ಸುಕಕ್ಕಿಂತ ಪ್ರೀತಿ ವಿಶ್ವಾಸ ತುಂಬಿದ ಜೀವನ ಸುಕ ಕೊಟ್ಟದೆತೇಳುವ ಸಂಗತಿ ಧಾರಣ, ಧ್ಯಾನ, ಸಮಾಧಿಂದ ಅನುಭವ ಆದೆ! ಪೊಕ್ಕಳ ರೊಟ್ಟಿ-ಕುಡು ಪಜ್ಜಿ ಜೊತೆ ಬೆಣ್ಣೆ ಇದ್ದರೆ ರಸ ಜಾಸ್ತಿಯಾದು ಎಷ್ಟ್ ನಿಜನೊ! ಹಂಗೆ "ಯೋಗ" ಜೀವನ ನಡ್ಸಿರೆ ಸಮಾಜಲಿ ನಂಬಿಕೆ, ಪ್ರೀತಿ-ವಿಶ್ವಾಸ ಹೆಚ್ಚಾಗಿ ಜೀವನ ರಸಮಯ ಆದೆತೇಳುದ್ ಅಷ್ಟೇ ನಿಜ!

**✍ ಹೊಳೆಕೆರೆ ಚೆಂಗಪ್ಪ**

## (ಕತಾ ಜೊಂಪೆ) ಅಯ್ಯೋ ಸಣಪಾ...

ಬೋಳ ಸಿಂಗ ರಾಜ ಆಗಿದ್ದ ಈ ಊರ್ಲಿ ಪ್ರಜೆಗಳೂ ಬೋಳರೇ ಆಗಿದ್ದೊ ತೇಳ್ದೊರ್ಲಿ ಮತ್ತೆ ಸಂಶಯ ಏನ್ ಹೇಳಿ? ರಾಜ ಉದಾಸೀನದ ಮಾರಿ, ಪ್ರಜೆಗ ಒಬ್ಬಂದೊಬ್ಬ ರಾಜಂದಾಚೆನ ಊಚೆಗ. ಹಂಗ್ಯಾಗಿ ಗೈಮೆನೇ ಇಲ್ಲದ ಈ ಊರ್‌ನ ಖಜಾನೆಗೆ ದುಡ್ಡು ಆಕೆ ಬೇಕಾಗಿ ಇಸ್ಪೇಟೋ, ಗಡ್‌ಂಗೋ, ಸೂಳೆಗಾರಿಕೆನೋ ಮತ್ತೊಂದೋ ನಡ್ಸಿಕೆ ರಾಜ ಬುಟ್ಟಿತ್ತ್, ಅದಂದ್ರಾಗಿ ಒಳ್ಳ ತೆರಿಗೆನೂ ಬಾತಿತ್ತ್, ರಾಜ್ಯ ನಡೆತಿತ್ತ್. ಸುತ್ತ ಮುತ್ತ ಊರ್‌ನವೆಲ್ಲವು ಅವರ ಊರ್‌ಲಿ ಇಲ್ಲದಂತ ಇಂತ ಗಮ್ಮತ್ತ್‌ಗಳಿಗೆ ಬೇಕಾಗಿ ಈ ಊರಿಗೆನೇ ಬಂದ್ ನಿಮುರ್ತಿದ್ದೊ. ಒಮ್ಮೆ ಇಲ್ಲಿ ಕಳ್ಳತನ ಮಾಡಿ ಸಿಕ್ಕಿ ಬಿದ್ದ ಒಬ್ಬ ಕಳ್ಳನ ವಿಚಾರಣೆ ಮಾಡಿ ಅಂವನ ತಲೆ ಕಡಿಯೊದು ತೇಳಿ ಎಲ್ಲವು ಸೇರಿ ತೀರ್ಮಾನ ಮಾಡ್ದೊ. ಆದರೆ ಈ ಊರ್ಲಿ ತಲೆ ಕಡಿಯಕೆ ಗೊತ್ತಿದ್ದೊವು ಒಬ್ಬೊನೂ ಇತ್ಲೆ ತೇಳಿ ಆಚೆ ಊರುಂದ ಒಬ್ಬನ ಕರ್ಸಿದೊ. ಆದರೆ ಅಂವ ತಲೆಂದ ಮೇಲೆ ಕ್ರಯ ಹೇಳ್ತ್. ಇದ್ ತಲೆಂದ ದೊಡ್ಡ ಮುಂಡಾಸ್ ಆಗ್ಯೋತಲೆ ಸಿವಾ, ಈ ವಯಿವಾಟೇ ಆಕಿಲೆ ತೇಳಿದ್ದ್ ಅಂವನ ಶಿಕ್ಷೆನ ಜೀವಾವಧಿ ಶಿಕ್ಷೆತೇಳಿ ತಿರ್ಗ್‌ಸಿದೊ, ಅಂವನ ಜೈಲ್‌ಲಿ ಇಸಿದೊ. ಆದರೆ ಅಂವಂಗೆ ಕಾವಲ್ ಕಾಯುವ ಜನಂಗೆ, ಅಂವನ ಉಂಬ-ತಿಂಬ ಕರ್ಚಿಗೆ ಸುಮಾರ್ ದುಡ್ಡು ಮುಗೆಕೆ ಸುರಾತ್. 'ಅಯ್ಯನಬಂಡೆ ಇದಾಕಿಲೆ, ಹಂಗಾರೆ ಅಂವ ಓಡಿಹೋದಾರ್ ಓಡಿಹೋಗಲಿ' ತೇಳಿ ಕಾವಲ್ ಕಾಯಂವನ ಕೆಲ್ಸಂದ ತೆಗ್ದೊ. ಆದರೆ ಹೊತ್ತಿಗೆ ಸರಿಯಾಗಿ ತಿಂಬಕೆ ಸಿಕ್ಕಿರೆ ಅಂವ ಯಾಕೆ ಹೋದೆಲ್ಲಾ, ಅಂವ ಹೋತೇಲೆ.

ಒಂದು ದಿನ ಬೋಳ ಸಿಂಗ ರಾಜ ಕಳ್ಳನಕ್ಕಲೆ ಹೋಗಿ 'ಅಯ್ಯೋ ಪುಣ್ಯಾತ್ಮ ನಿನ್ನ ಕಾವಲ್ ಕಾಯಂವನೂ ಇಲ್ಲೆಂತಾಕನ ನೀ ಯಾಕೆ ಜೈಲ್ ಬುಟ್ಟ್ ಹೋದುಲೆ ಮಾರಾಯಾ?' ಆಂತ ಕೇಳ್ದಕ್ಕೆ ಅಂವ 'ನೀವೆಲ್ಲ ಸೇರಿ ನನ್ನ ಜೈಲ್‌ಗೆ ಹಾಕಿ ನಾ ಗೈಮೆ ಮಾಡ್ದೊರ್ನೇ ಮರಿವಾಂಗೆ ಮಾಡ್ಯೊಳರಿ. ಗೆಯ್ಯಕೆ ಗೊತ್ತಿಲ್ಲದೆ ಜೈಲ್‌ಂದ ಹೊರಗೆ ಹೋಗಿ ನಾ ಮೊಣ್ಣು ಮುಕ್ಕುದಾ? ನಾ ಗಂಜಿ ಉಂಬೊದು ಹೇಂಗೆ? ನಾ ಇಲ್ಲೇ ಇದ್ದನೆ' ಆಂತೇಳ್ತ್. ತಿರ್ಗಿ ರಾಜ ಹೇಳ್ತ್ 'ಇಂದಾ ಮಾರಾಯಾ, ನಿನ್ನ ಕಾಲ್ ಹಿಡ್ಕಣೆ. ನೀ ಕಳ್ಳ ಅಲ್ಲ. ನಂಗೆ ನೀ ಸಣಪನಾಂಗೆ. ದಮ್ಮಯ ಮಾರಾಯಾ ಒಮ್ಮೆ ಹೋಗಿಬುಡು. ನಿನ್ನ ಕರ್ಚಿನ ತಡ್ಕಂಬಕೆ ನಂಗೆ ಆದುಲೆ' ತೇಳ್ದಕ್ಕೆ ಅಂವ 'ಇಂದ ಮಜ, ಹಂಗಾರೆ ನೀ ವರ್ಷಕ್ಕೆ ಇಷ್ಟ್ ತೇಳಿ ನನ್ನ ಬ್ಯಾಂಕ್ ಎಕೌಂಟ್‌ಗೆ ಹಾಕ್. ನಾ ಈಗಳೆ ಹೋನೆ' ತೇಳ್ತ್. 'ಹೆಂಗಾರ್ ಒಮ್ಮೆ ಈ ಮಾರಿ ಹೋಗಲಿ ಅತ್ತ, ಇಂವನ ಪಡೆ ಮುತ್ತ'

ತೇಳಿ ಗ್ರೈಸಿಕಂಡ್ ಬೋಳಸಿಂಗ ಒಪ್ಪಿತ್. ಅಲ್ಲಿಂದ ಮೇಲೆ ಬೋಳಸಿಂಗನ ಖಜಾನೆಂದ ದರ್ಮಕ್ಕೆ ಬಾತಿದ್ದ ದುಡ್ಡುಲಿ ಆ ಕಳ್ಳ ಗಮ್ಮತ್ತ್ ಮಾಡಿಕಂಡ್ ವಾಪಾಸ್ ಆಗಾಗ ಸಣ್ಣ ಸಣ್ಣ ಕಳ್ಳತನ ಮಾಡಿಕಂಡ್, ಗಮ್ಮತ್ತ್‌ಲಿ, ಮಂಡೆಬೆಚ್ಚ ಇಲ್ಲದೆನೇ ದಿನ ತೆಗೆತಾ ಇತ್ತ್. ಅಂವನ ಕಳ್ಳತನ ಗೊತ್ತಾದರೂ ಬೋಳಸಿಂಗಂಗೆ ಅಂವನ ಏನೂ ಮಾಡಿಕೆ ಆತಿತ್ಲೆ. ಯಾಗೋಳು ಆ ಕಳ್ಳನ ನೋಡಿ ಅಂವನಷ್ಟಕ್ಕೆ, ದೊಂಡೆ ಒಳಾಗೆ, ಹೆಣ್ಣ್‌ಗೂ ಗೊತ್ತಾಗದಂಗೆ, ಹೇಳಿಕಂತಿತ್ತ್ 'ಅಯ್ಯೋ ಸಣಪಾ'!!!

✍ ಸೀತಾರಾಮ ಕೇವಳ

* * * * *

ಕವನ

## ದೊಡ್ಡವರಾಗುವ ಆಸೆ



ಹಾಕಿದೆ ಕೂಸು ದೊಡ್ಡವರ
ಚಪ್ಪಲಿ, ಕನ್ನಡಕ, ಅಂಗಿ, ಬಳೆ
ತಾನೂ ಅವರ ಹಾಂಗೇ ಆಗಿಬುಟ್ಟೆ
ಅಂತಾ ಅದ್ ತಿಳ್ದದೆನೋ ಏನೋ!

ನಗು ಕುಸಿ, ಹೊಸ, ಗತ್ತ್, ಕೋಕು
ಹೆಜ್ಜೆ ತಪ್ಪಿ ಬೀಳ್ಕನ ಗೊತ್ತಾದ್ದೆ
ಇದ್ ತನ್‌ಗೆ ಸರಿಯಾದುಲೆ
ಮತ್ತೂ ಬೆಳಿಯೋಕೂತ

ಆದರೆ ಗಳಿಗೆ ಗಳಿಗೆಗೂ ದೊಡ್ಡದಾಗುವ
ಅದರ ಆಸೆನ ತಡಿವವು ಯಾರು?
ಸಣ್ಣ ಕೂಸು ಕಲ್ಸಿದೆ ಸಣ್ಣದರ್‌ಂದ
ದೊಡ್ಡದಾಗುವ ಪಾಟನ
ನಾವು ಮಾತ್ರ ನೋಡ್‌ರೂ ಕಲಿಯುದುಲೆ
ದೊಡ್ಡವರಾದವರ ರೀತಿನ!

✍ ಶಿವದೇವಿ ಅವನೀಶಚಂದ್ರ

# ಬಾಳ್ ಬಂಗಾರ

ಸ್ವರ್ಗವೇ ಭೂಮಿಗೆ ಬಂದ್ ನೆಲ್ಸಿದಂಗೆ ಕಾಣ್ಸೋ ಹಚ್ಚ ಹಸ್‌ರ್, ಚಿಲಿಪಿಲಿತಾ ಕೂಂಗಿಕಂಡ್ ಮನ್‌ಸಿಗೆ ಉಲ್ಲಾಸ ಕೊಡೋ ಹಕ್ಕಿಗ. ಭೂಮಿ ತಾಯಿಗೆ ಹಸಿರ್ ಸೀರೆನ ಉಡ್‌ಸಿ ಶೃಂಗಾರ ಮಾಡಿದಂಗೆ ಕಾಣೋ ನಾಟಿ ಗದ್ದೆಗ, ದೇವತೆಗಳೇ ದೇವಲೋಕಂದ ನೊರೆ ಹಾಲ್ನ ಹೊಯ್‌ತಾ ಇರೋಂಗೆ ಕಾಣೋ ತೋಡ್‌ಗಾ.

ಇಂತ ಸುಂದರ ಪ್ರಕೃತಿಯ ಮಡಿಲ್‌ಲ್ಲಿ ವಾಸ ಮಾಡ್ತಾಯಿತ್ ನಮ್ಮ ಚಿನ್ನಪ್ಪ. ದೊಗ್ಗುಳೆ ಶೇರ್ಟ್ ಪ್ಯಾಂಟ್‌ನ ಸಿಗ್‌ಸಿಕೊಂಡ್, ಎಲೆ ಅಡಿಕೆ ಚೆಂಚಿನ ಪ್ಯಾಂಟಿಗೆ ಅಂಟಿಸಿಕೊಂಡ್, ಬಾಯಿ ಬ್ಯಾನೆ ಬರೋ ಮುಟ್ಟ ಅಡಿಕೆನ ಅಗ್ದ್‌ಕಂಡ್, ಜಂಭರ, ಸಂತೆತಾ ಓಡಾಡಿಕಂಡ್ ಹೇಂಗೋ ಕೆಲ್‌ಸ ನಿಭಾಯಿಸಿಕಂಡ್ ಮನೆ ನಡ್‌ತ್ನಾ ಇತ್ ಚಿನ್ನಪ್ಪ.

ಚಿನ್ನಪ್ಪನ ಹೆಣ್ಣ್ ಜಾನಕಿ. ಗಂಡನೇ ದೇವರ್‌ತಾ ನಂಬಿಕಂಡ್, ಇದ್ದ ಮನೇನ ಮನಾರ ಮಾಡಿಕಂಡ್, ಅಕ್ಕಿರೊಟ್ಟಿ ತಟ್‌ತಾ, ಅಗೆ ನಾಟಿಯವ್‌ಕೆ ಕಡ್‌ಂಬಿಟ್ಟ್ ಬೇಯ್‌ಸ್ತಾ ಇರ್‌ತಿತ್. ಚಿನ್ನಪ್ಪಂಗೆ ಇಬ್ಬರ್ ಮಕ್ಕ. ಕೀರ್ತಿಗೆ ಒಬ್ಬ ಹೈದಾ, ಹಂಗೇ ಆರ್‌ತಿಗೆ ಒಬ್ಬಳ್ ಗೂಡೆ. ಮಕ್ಕಳಿಬ್ಬರ್ ಅದೇ ಹಳ್ಳಿಯ ಇಸ್ಕೂಲ್‌ಲ್ಲೇ ಓದ್‌ತಾ ಇದ್ದೋ.

ಚಿನ್ನಪ್ಪನ ಮಂಞ ರಾಜ, ಭಾರೀ ಚೂಟಿ ಹೈದ. ಅಷ್ಟಾಗಿ ವಿದ್ಯೆ ತಲೆಗೆ ಹತ್ತ್‌ತಿತ್ತ್‌ಲೇ. ಆದ್‌ರೆ ಕೆಲಸ ಕಾರ್ಯಲಿ ಭಾರೀ ಮುಂದು. ಖಾಕಿ ಚೆಡ್ಡಿ ಹಾಕಿ ನಾಟಿಗೆ ಇಳ್‌ತ್‌ತಾ ಹೇಳ್ರೆ ಗದ್ದೆಲಿ ಇದ್ದವೆಲ್ಲಾ ಅವನ ನೋಡಿನೇ ಬಾಕಿ ಆಗ್‌ತಾ ಇದ್ದೋ.

ಇನ್ನ್ ಮಗಳ್ ರಾಣಿಯ ಕಥೆನೇ ಬ್ಯಾರೇ. ಯಾಗಲು ಪುಸ್ತಕಕ್ಕೆ ಮಾಯಿಣದಂಗೆ ಅಂಟಿಕಂಡೇ ಇರ್‌ತಿತ್ತ್. ಅಪ್ಪ ಸಂತೆಂದ ತಂದ ಒಣ್‌ಗಿಲ್ ಮೀನ್‌ನ ಕಾಗದ ಆಗ್ಲಿ, ಇಲ್ಲೇ ಕಡ್ಲೆಗೆ ಸುತ್ತಿದ ಕಾಗದನೇ ಆಗ್ಲಿ ಒಂದಕ್ಷರ ಬಿಡದಂಗೆ ಓದಿ ಮುಗ್‌ಸಿ ಬಿಡ್ತಾಯಿತ್.

ಆದ್ರೆ ಚಿನ್ನಪ್ಪನ ಮನೇಲಿ ಮಕ್ಕಳಿಗೆ ಓದೋ ಯಾವ್‌ದೇ ವಾತಾವರಣ ಇರ್‌ತಿತ್‌ಲೆ. ಬೆಳ್‌ಗೆ ಕೋಳಿ ಕೂಂಗೊ ಹೊತ್ತಿಗೆ ಎದ್ದ್ ಜಾನಕಿ ಒಲೆಗೆ ಬೆಂಕಿ ಮಾಡಿ, ಕರಿಬೆಲ್ಲ ಹಾಕಿ ಕಾಪಿ ಕಾಯ್ಸಿ, ತಂಗ್‌ಳ್ ಅನ್ನ ಹಾಕಿ ರೊಟ್ಟಿ ತಟ್ಟಿ ಪಚ್ಚೆ ತುಂಬ ಇಸ್‌ತ್ತಿತ್. ಇತ್ತ ಚಿನ್ನಪ್ಪ ಕಾಪಿ ಕುಡ್‌ದ್, ಶಂಕರ ಮತ್ತೆ ಕೆಂದ ಎತ್‌ಗಳನ್ನ ಹಟ್ಟಿಂದ ಹೊಡ್‌ಕಂಡ್, ನೇಗ್‌ಲ್, ನೋಗ, ತಮ್ಮಿ ತಕಂಡ್ ಕಂಪಗದ್ದೆಗೆ ಹೋಗಿ ಬೆಳಗಾಕೆ ಮುಂದೆ ಓಹೋ ಓಹೋ ಹರ ಹರ.... ಪದ ಕಟ್ಟಿಕಂಡ್ ಹೂಡಿ ಮುಗ್‌ಸಿ, ಎತ್ತ್‌ಗಳ ಮೈ ತೊಳ್‌ದ್, ಮನೆಗೆ ಹೋಗಿ ಪಚ್ಚೆಲಿ ಇದ್ದ ಐದಾರ್ ರೊಟ್ಟಿ ತಕಂಡ್, ಕಾಪಿಗೆ ಕಂತ್‌ಸಿ ಹೊಟ್ಟೆ ಪೂಜೆ

ಮಾಡ್‌ತಿತ್.

ಇನ್ನ್ ಆ ಮನೆಗೆ ದಿನಾ ನೆಂಟರ್ ಬಾದು, ಕೋಳಿ ಕೊಲ್ಲುದು, ಕಡ್‌ಂಬಿಟ್ಟ್ ಬ್ಯೇಯಿಸುದು, ಮನೆಗೆ ಸೆಗಣಿ ಸಾರ್‌ಸುದೂ, ಇನ್ನ್ ಮಳೆಗಾಲ ಬಾತ್‌ತಾ ಹೇಳ್ರೆ, ಅಮ್ಮ ಮಂಜ ಸೇರಿ ಎಸಂಡ್ ಹಿಡ್ಯಾಕೆ ಹೋದು, ಗದ್ದೆ ಪುಣೀಲಿ, ಬಾಣೆಲಿ ಅಣುಬು ಹುಡ್ಕುದೂ, ವಾಟೆಕಣಲೆ, ಮಾಯಿನ ಮಿಡಿನ ಕೊಯ್ದ್ ಬೆರಣಿಗೆ ಹಾಕುದೂ, ಕರಿಕೆಸ ಕುಯ್‌ದ್ ಗೈಪು ಮಾಡ್ದು, ಪತ್ರೊಡೆ, ಕೂಗ್‌ಲಿಟ್ಟ್ ಮಾಡಿ ನೆರೆಮನೆಯವ್‌ಕೆ ಕೊಡ್ದು, ಇದೇ ಜಾನಕಿನ ಕೆಲ್‌ಸ.

ಇನ್ನ್ ಮೀನ್ ಗದ್ದೆಗೆ ಹತ್ತಿತ್ತ್‌ತ ಹೇಳ್ರೆ ಅಪ್ಪ ಮಂಞ ಸೇರ್‌ಕಂಡ್ ಪಡಹಾಕುದೇ!!! ಕತ್ತಲಾಗ್ತಾ ಬಾಕನ ಹಳೇ ಕರಿ ಚಟ್ಟೀಲಿ ಮಣ್ಣ್ ಉಜ್ಜಿಟ್ಟ ಹಲ್‌ಸ್‌ನ ಬೀಜ ಹಂಗೆ ಬೆಸಗೆಲಿ ಒಣ್‌ಗಿಸಿದ ಜೋಳ ಕೂಂಬೆ ಹೊರ್ದು ತಿಂಬದೆ ಕೆಲ್‌ಸ.

ಚಿನ್ನಪ್ಪಂಗೆ ಜೀವನಕೆ ಕಷ್ಟ ಏನ್ ಇತ್ಲೆ. ಅಪ್ಪ ಸತ್ತ ಮೇಲೆ ಅಪ್ಪನ ಹತ್ತ್ ಏಕ್‌ರೇ ಜಾಗ ಅವನ್‌ದೇ. ಉದಾಂದ ಉದ್ದಕ್ಕೆ ದೊಡ್ಡ ಗದ್ದೆ, ಕೊಳಂಜಿ, ಕಂಪಗದ್ದೆ, ಮಾನೀತಾ ಊಟಕ್ಕೆ ಯ್ಯಾವುದೇ ತೊಂದರೆ ಇತ್ಲೆ. ಜಾನಕಿ ಮೀಯೋ ಹಂಡೆ ಪೂರ್ತಿ ಭತ್ತ ಬೇಯ್ಸಿ, ಕೊಸ್ಲುಭತ್ತಸಾ ಮಾಡ್ತಿತ್.

ಆದರೆ ಅವನ ತೋಟ ಅಷ್ಟ್ ರೂಡಿಲಿ ಇತ್ಲೆ. ಕೆಲಸ ಕಡಿಮೆತಾ ಸಾಕಷ್ಟ್ ಏಲಕ್ಕಿ ಗಿಡನ ಹಾಕ್ಕಿದ್ದೋ. ಎಲ್ಲೆಲ್ಲೋ ಅಕಾಶ ಎತ್ರಕ್ಕೆ ತಲ್‌ಪಿದ ಹೂತಿಟ್ಟ ಕೆಲ ವೊಂದ್ ಬೇರ್ ಗಿಡಾಲಿ ಕಾಪಿ ಕಾಂಬಕ್ಕೆ ಸಿಗ್‌ತಿತ್. ಚಿನ್ನಪ್ಪನ ಸಂಸಾರಕೆ ಬೇಕಾಗುವ ತೆಂಗಿನಕಾಯಿ ಕೂಡ ಇತ್ತ್. ಯ್ಯಾಗಾರ್ ಜಂಭರಕೆ ಜೀಪಲಿ ಕಲ್ಲುಗುಂಡಿಗೆ ಹೋದ್ರೆ ಕಳ್ಳ್ ಖರ್ಚಿಗೆ ಸಿಕ್ಕಿದೇತ ನೆಟ್ಟ ಅಡಿಕೆ ಮರಗಳ್‌ಲಿ ಅಡಿಕೆ ಪಸ್‌ಲ್‌ಸಾ ತಕ್ಕ ಮಟ್ಟಿಗೆ ಇರತಿತ್ತ್. ಹಾಂಗೇತ ಜಾಗ ಏನ್ ಖಾಲಿ ಇತ್ಲೆ. ಹೋದಲೆಲ್ಲಾ ಬೆದ್‌ರ್‌ನ ರಾಶಿ ನೋಡಿಕೆ ಸಿಗ್‌ತ್ತಿತ್. ಮಳೆಗಾಲಕೆ ಕಣಲೆನ ಗೈಪ್ ಮಾಡಕ್, ತರಕಾರಿ ತೋಟಕೆ ಬೆದ್‌ರ್‌ನ ಒಡ್ದ್ ಬೇಲಿನಾರ್ ಕಟ್ಟಕ್‌ತಾ ಚಿನ್ನಪ್ಪನ ಗ್ಯಾನ ಆಗಿತ್ತ್.

ಒಟ್ಟ್‌ನಲ್ಲಿ ಮುಂದೆನ ಜೀವನದ ಯಾವುದೇ ಗ್ಯಾನ ಮಾಡ್ದೇ, ಅಂದ್‌ನ ಬದುಕುನ ಭಾರೀ ಪೊರ್ಲುಲೇ ಕಳಿತಾ ಇದ್ದೋ ಚಿನ್ನಪ್ಪ ಹಂಗೆ ಇಡೀ ಊರ ಜನ.

ಇತ್ತಕಡೆ ಚಿನ್ನಪ್ಪನ ಮಗಳ್ ರಾಣಿ ಓದೋ ತನ್ನ ಆಸೆನಾ ಮುಂದ್ ವರ್‌ಸಿಕಂಡೇ ಬಾತ್. ಅಣ್ಣ ರಾಜನ ತಲೆಗೆ ಮಾತ್ರ ವಿದ್ಯೆ ಹತ್ತ್‌ತಾನೇ ಇತ್ಲೆ. ಅಪ್ಪ ನೆಟ್ಟ ಆಲದ ಮರದ ಕೆಳಗೆನೇ ಬದ್‌ಕಿನೆತಾ ಅವ ಗ್ಯಾನ ಮಾಡಿತ್ತ್. ಮಂಜ ಓದಿ ಅದ್ಯಾವ ಅಪೀಸರ್ ಆಕೂತಾ ಗ್ಯಾನ ಮಾಡಿ ಚಿನ್ನಪ್ಪ ಮಂಜ ರಾಜನ ಇಸ್ಕೂಲ್‌ನಿಂದ ಬಿಡ್‌ಸೇ ಬಿಡ್ತ್. ರಾಜ ಅಪ್ಪನ ದಾರೀಲೇ ಬದ್‌ಕಿಕೆ ಶುರು ಮಾಡ್ತ್.

ವರ್ಷಗ ಉರ್ಳಿದೋ, ಚಿನ್ನಪ್ಪನ ಮಗ್ಳ್ ರಾಣಿ ಅದೇ ಹಳ್ಳಿನ ಸರ್ಕಾರಿ ಶಾಲೆಲೇ ಓದಿ ಹತ್ತ್‌ನೆ ಕ್ಲಾಸ್‌ಲೀ ಜಿಲ್ಲೆಗೆ ಎರಡ್‌ನೇ ರ್‍ಯಾಂಕ್ ತಕಂಡತ್. ಅದರೊಟ್ಟಿಗೆ ಅವಳ ಓದೋ ಕನ್ಸ್‌ಸಾ ಬೆಳಿತಾನೇ ಹೋತ್. ಆದ್‌ರೇ ಚಿನ್ನಪ್ಪ ಆಗ್‌ಲೀ, ಹೆಣ್ಣ್ ಜಾನಕಿಯಾಗ್ಲಿ ಇದರ ಗೊಡವೇ ಇಲ್ಲದಂಗೆ ಇದ್‌ಬಿಟ್ಟೋ. ರಾಣಿನ ಇಸ್ಕೂಲ್ ಮೇಷ್ಟ್ರಗ ಎಲ್ಲಾ ಸೇರಿ ಒಂದ್ದೊಳ್ಳ ಕಾಲೇಜಿಗೆ ಅರ್ಜಿ ಹಾಕಿದೋ. ರಾಣಿಗೆ ಪಟ್ಟಣದ ಒಂದ್ದೊಳ್ಳ ಕಾಲೇಜ್‌ಲಿ ಪುಸ್ಕಟೆ ಸೀಟ್ ಕೂಡ ಸಿಕ್ಕಿತ್.

ಒಂದೊಳ್ಳೆ ಸಮಯ ನೋಡಿ ರಾಣಿ ಅಪ್ಪನ ಕೇಳ್ತ್ "ಅಪ್ಪಾ ನಂಗೆ ಬ್ಯಾರೆ ಕಾಲೇಜ್‌ಲಿ ಪುಸ್ಕ್‌ಟೆ ಸೀಟ್ ಸಿಕ್ಕ್ಯುಟ್ಟು. ನಾನ್ ಓದಿಕೆ ಹೋನೆ ಅಪ್ಪಾ, ದೊಡ್ಡ ಆಫೀಸರ್ ಆಗಿ ಈ ಊರಿಗೆ ಹೆಸರ್ ತನ್ನೆ ಅಪ್ಪಾ".




ಈ ಊರಿಗೆ ನಾನ್ ಹುಟ್ಟ್ಯೋಕೆ ಮೊದ್‌ಲೇ ಹೆಸ್‌ರ್ ಇಟ್ಟೋಳೊ ಗೂಡೆ. ನೀ ಏನ್ ಹೆಸರ್ ತಾದು ಬ್ಯಾಡ ಅಂತಾ ಹೇಳಿ ಕೆಂಪ್ ಬಾಯಿ ಬಿಟ್ ಕಂಡ್ ನಗಾಡ್ತ್ ಚಿನ್ನಪ್ಪ.

"ನಾನ್ ಓದೇ ಓದಿನೇ, ಕಾಲೇಜ್ ಸೇರೆ ಸೇರ್‌ನೆ" ತಾ ಹೇಳಿ ಮರ್ಡ್ತಾ ರಾಣಿ ಕೊಂಬರೆ ಸೇರ್‌ತ್.

ಇದನ್ನೆಲ್ಲಾ ನೋಡ್‌ತಾ ಜಗ್‌ಲ್‌ಲಿ ಕುದ್ದಿದ್ದ ಚಾಂಪ ಹೇಳ್ತ್ "ನೀ ಓದಿ ಏನ್ ಕಡ್‌ದ್ ಹಾಕಿಕೆ ಇರ್ದು. ಬರೋ ಆಟಿತಿಂಗ ಕಳ್‌ದಂಗೆ ವಾಲಗ ಊದ್ಸುದೆ. ಗೂಡೆಗ ಮನೆ ಬಿಟ್ ಹೋದವು ಯ್ಯಾರ್ ಉದ್ದಾರ ಆತ್ಲೆ. ನೀನ್ ಸಾ ಅಷ್ಟೆ. ಸುಮ್ಮನೆ ಮನೇಲಿ ಅಡ್‌ಗೆ, ಅಗೆ ಕಲ್‌ತ್ ಕಂಡ್ ಇರ್, ಓದು ಗಡ ಓದು ನಿಂಗೆ ".

ರಾಣಿ ಮರ್ಡ್‌ತಾ , ಮರ್ಡ್‌ತಾ ಅನ್ನ-ನೀರ್ ಬಿಟ್ಟ್ ಕೊಂಬರೆ ಮೂಲೆ ಸೇರ್ತ್. ಮಗ್ಳ್ ಎಲ್ಲಿ ಕೈ ತಪ್ಪಿ ಹೋದೆನೋತಾ ಗ್ಯಾನ ಮಾಡ್ತ ಜಾನಕಿ ಮೆಲ್ಲೆಗೆ ಗಂಡನ ಪುಸ್‌ಲಾಯಿಸಿ ರಾಣಿನಾ ಓದಿಕೆ ಕಳ್‌ಸಿಕೆ ಒಪ್ಪಿಸೇ ಬಿಡ್ತ್.

ಅಂತೂ ಇಂತೂ ರಾಣಿ ಊರ್ ಜನ್‌ರ ಟೀಕೆಗಳ್‌ಗೆ ಕ್ಯಾರೆ ಅನ್ನದೇ ಮುಂದೆ ಗುರಿ, ಗುರು ಎರಡ್‌ನ್ನ ಇಟ್ಟ್ ಕಂಡ್ ಕಾಲೇಜ್ ಸೇರ್ತ್. ಹಳ್ಳಿ ಜೀವನ, ಮನೆನ ಕಷ್ಟ ಎಲ್ಲನ ಸರಿಯಾಗಿ ತಿಳ್‌ದಿದ್ದ ರಾಣಿ ಯಾವುದೇ ಅಡ್ಡ ದಾರಿ ಹಿಡಿಯದೆ ತನ್ನ ಗುರಿಯ ಕಡೆಗೆ ಮುನ್ನುಗಿತ್.

ವರ್‌ಷಗ ಕಳ್‌ದವು. ಅದೊಂದು ದಿನ ಹಳ್ಳಿ ಕಟ್ಟೆಯ ಸುತ್ತ ಯ್ಯಾವ್‌ದೋ ಪೇಪರ್‌ಗಾಗಿ ಬೊಬ್ಬೆ ಹಾಕ್‌ತಿದ್ದೋ. ಇತ್ತ ಅದೆಲ್ಲೋ ಇದ್ದ ರಾಜಸಾ ಓಡಿ ಬಂದ್ ಪೇಪರ್‌ನ ಎಳ್ದ್‌ಕಂಡ್ ಗದ್ದೆಪುಣಿ ಮೇಲೆ ಹೋಗಿ ನಿಂತ್‌ಕಂಡ್ತ್.

ಆಗ ಅಲ್ಲೊಬ್ಬ ಯ್ಯಾರೋ ಹೇಳ್ತ್ "ಓ ಹೋ ಪೇಪರ್ ಸರಿಯಾದ ಹೈದಂಗೆ ಸಿಕ್‌ತ್ ಅಲಾ, ಒಮ್ಮೆ ಅದನ್ನ ಓದು ಮರಾಯ"

ರಾಜ ಪೇಪರ್‌ನ ಬಿಡ್‌ಸಿ ನೋಡ್‌ದಾಂಗೆ ಅವಂಗೆ ದೇವರ್‌ಗ ಅವನ ತಲೆ ಮೇಲೆ ಮಲ್ಲಿಗೆ ಹೂನ ಹಾಕಿದಂಗೆ ಆತ್. ಪೇಪರ್‌ಲಿ ಅವನ ತಂಗೆ ರಾಣಿನ ಫೋಟೋ ಮೇಲೆ ದಪ್ಪ ಅಕ್ಷರಲಿ ಬರ್‌ದಿದ್ದೋ. "ರೈತ ಚಿನ್ನಪ್ಪನ ಮಗಳು ರಾಣಿ ಐ.ಎ.ಎಸ್ ಪರೀಕ್ಷೆಲಿ ರ‍್ಯಾಂಕ್" ತ. ಪೇಪರ್ ಓದ್‌ತಿದಂಗೆ ಊರಿಗೆ ಊರೇ ಸುಸ್ತಾಗಿ ಬಿಟ್ಟೋ. ಊರ್ ಬಿಟ್ ಹೋಗೋ ಹೆಣ್ಮಕ್ಕ ಉದ್ದಾರ ಆಲೆತಾ ಹೇಳ್ದ ಚಾಂಪನ ಗೋರಿಸಾ ಒಮ್ಮೆ ಶೋಭೆ ಕಳ್‌ಕಂಡಂಗೆ ಕಂಡತ್.

ರಾಜ ರಭಸಲಿ ಓಡಿ ಹೋಗಿ ಅಪ್ಪ-ಅಮ್ಮಂಗೆ ಪೇಪರ್ ತೋರ್ಸಿತ್. ಹೆತ್ತ ಕರಳ್‌ಗ ಕುಸೀಲಿ ಕಣ್ಣೀರ್ ಸೊರ್‌ಸಿದೊ.

ವಾರ ಕಳ್‌ದ ನಂತರ ಚಿನ್ನಪ್ಪನ ಮನೆ ಮುಂದೆ ಕೆಂಪು ಗುಬ್ಬಿಯ ಕಾರೊಂದ್ ಬಂದ್ ನಿಂತ್ತತ್. ಊರ ಜನ ಬಿಟ್ಟಕಣ್ ಬಿಟ್ಟಂಗೆ ನೋಡ್ತಾ ಇದ್ದೋ. ಬಿಳಿಬಟ್ಟೆ ಹಾಕಿದ್ದ ದಾಂಡಿಗನೊಬ್ಬ ಕಾರ್ ಇಳ್ದ್, ಕಾರ್‌ನ ಹಿಂದೆ ಡೋರ್‌ನ ತೆಗ್‌ತ್.ಹಳ್ಳಿ ಗೂಡೆ ರಾಣಿ... ಮಹಾರಾಣಿತರ ಕಾರ್‌ಂದ ಇಳ್‌ತ್. ನೆಟ್ಟಗೆ ಹೋಗಿ ಅಪ್ಪ, ಅಮ್ಮ, ಅಣ್ಣನ ಆಶೀರ್ವಾದ ತಕಂಡತ್. ಊರಿಗೆ ಊರೇ ರಾಣಿ ಗೂಡೆನ ಏಳಿಗೆ ನೋಡಿ ಕುಷಿ ಪಟ್ಟೋ.

ದಿನಗಳ್ ಕಳೆದಂಗೆ ರಾಜ ಕುಗ್ಗಿಕೆ ಶುರುಮಾಡ್ತ್. ತನ್ನ ತಂಗೆಗೆ ಸಿಕ್ಕ ಮರ್ಯಾದೆ ಸಿರಿತನ ಅವಂಗೂ ಬೇಕ್‌ತಾ ಅನ್‌ಸಿಕೆ ಶುರು ಆತ್.

ಒಂದು ದಿನ ರಾಜ, ರಾಣಿ ಹತ್‌ರಕ್ಕೆ ಹೋಗಿ "ನೋಡ್ ತಂಗೆ ನನ್ನ ಬಾಳ್ ಹಾಳಾಗಿ ಹೋತ್, ನಾನ್‌ಸಾ ನಿನ್ನಾಂಗೆ ಓದಿದ್ದರೆ ನನ್ನ ಜೀವ್‌ನಸಾ ಲಾಯ್ಕ ಇರ್‌ತಾ ಇತ್ತ್. ಕಾಲ ಮಿಂಚಿ ಹೋತ್. ನಾನ್ ಏನ್ ಸಾಧಿಸಿಕೆ ಆತ್ಲೆ" ತಾ ಹೇಳ್‌ಕಂಡ್ ಕಣ್ಣೀರ್ ಸುರ್‌ಸಿತ್.

ಆಗ ರಾಣಿ "ಅಣ್ಣಾ ನೀನ್ಯಾಕೆ ಹಿಂಗೆ ಗ್ಯಾನ ಮಾಡಿಯಾ?. ನೀ ಹೇಳ್‌ದಂಗೆ ವಿದ್ಯೆ ಬದ್‌ಕ್‌ಲಿ ತಂಬಾನೇ ಮುಖ್ಯ, ಆದ್ರೆ ಏನ್ ಮಾಡ್‌ದು. ಎಲ್ಲರ ಬಾಳ್ ಒಂದೇ ತರ ಇರ್‌ದುಲೇ. ಎಲ್ಲವ್‌ಕು ಓದ್ ಕೈ ಹಿಡಿಯಲೇ. ಆದ್ರೆ ಪ್ರತಿ ಕೆಲಸಕ್ಕೆ ತನ್ನದೇ ಮಹತ್ವ ಉಟ್ಟು ನೀನ್ ಕೂಡ ಕೃಷಿಲಿ ಸಾಧನೆ ಮಾಡಕ್.

ಕಾಲ ಏನ್ ಮಿಂಚಿ ಹೋತ್ಲೆ. ಸಾಧನೆ ಮಾಡಿಕೆ ಯಾವ ವಯಸ್ಸಿನ ಮಿತಿ ಇಲ್ಲೆ. ನನ್ನ ಸಹಕಾರ ನಿಂಗೆ ಯಾವಗ್‌ಲ್ ಉಟ್ಟು. ಇಂದ್ ಕಷ್ಟಪಟ್ಟರೆ ಮುಂದೆ ನಿಂಗೆ ಸುಖ ಕಂಡಿತ ಉಟ್ಟು".

ತಂಗೆನ ಮಾತ್ ಕೇಳಿ ರಾಜಂಗೆ ನೂರಾನೆ ಅವನ ಜೊತೆ ಸೇರ್‌ದಂಗೆ ಆತ್. " ಹೇಳ್ ತಂಗೆ ಹೇಳ್ ! ನೀ ಹೇಳ್ದಾಂಗೆ ನಾ ಕಷ್ಟ ಪಟ್ಟ್ ಕೆಲ್‌ಸ ಮಾಡ್ನೆ. ಏನ್ ಮಾಡಕೂ ಹೇಳ್" ತಾ ರಾಜ ತಂಗೆನ ಕೇಳ್ತ್.

ಬುದ್ಧಿವಂತೆ ರಾಣಿ ರಾಜಂಗೆ ಸರಿಯಾದ ಮಾರ್ಗದರ್ಶನ ಕೊಟ್ಟತ್. ರಾಣಿ ಹೇಳ್ದಾಂಗೆ ರಾಜ ಕೃಷಿಲಿ ಹಗಲ್ ರಾತ್ರಿ ಕಷ್ಟಪಟ್ಟತ್. ತನ್ನ ಹತ್ತ್ ಏಕರೆ ಜಾಗಲಿ ಮಿಶ್ರ ಬೆಳೆ ಬೆಳಿಯಕೆ ಸುರು ಮಾಡ್ತ್. ನೀರಾವರಿ ಭೂಮಿಲಿ ಚೆನ್ನದ ಬೆಳೆಬೆಳ್ತ್. ಕಾಪಿ, ಏಲಕ್ಕಿ, ಚಾಳೆ, ಕಮ್ಮ್, ಬಾಳೆ, ಒಳ್ಳೆಮೆಣಸ್, ಗೇರ್, ರಬ್ಬರ್ ಬ್ಯಾರೆ ಬ್ಯಾರೆ ಹಣ್ಣ್‌ಗ, ತರಕಾರಿಗಳ್ನ ಬೆಳಿಯಕೆ ಸುರು ಮಾಡ್‌ತ್. ಅದರೊಟ್ಟಿಗೆ ಜೇನ್‌ಕೃಷಿ, ಹಂದಿ, ಕೋಳಿ, ಮೀನ್, ಹಸ್‌ಗಳ್‌ನ ದೊಡ್ಡ ಪ್ರಮಾಣಲಿ ಸಾಂಕಿಕೆ ಸುರ್‌ಮಾಡ್‌ತ್. ಹಿಂಗೆ ಹಲವಾರ್ ಯೋಜನೆಗಳ್‌ನ ಸರಿಯಾಗಿ ನಿಭಾಯಿಸಿತ್. ಮುಂದೊಂದು ದಿನ ರಾಜ್ಯದ ಪ್ರಗತಿಪರ ರೈತತೇಳ್‌ವ ಪ್ರಶಸ್ತಿನ ಕೂಡ ತಕಂಡತ್. ಅಧಿಕ ಲಾಭ ಹಂಗೆ ಹೆಸರ್ ಮಾಡ್ತ್. ಮುನ್ನುಗ್ಗುವ ಛಲ ಮತ್ತೆ ಕಷ್ಟಪಟ್ಟರೆ ಮನ್‌ಷ ಏನ್ ಬೇಕಾದ್‌ರ್ ಸಾಧಿಸಕ್ ತಾ ಹೇಳ್ದನ ರಾಜ ತೋರ್‌ಸಿ ಕೊಟ್ಟತ್.

ರಾಜ ಮತ್ತೆ ರಾಣಿ ಊರಿಗೆ ಮಾದರಿಯಾದೋ. ವಿದ್ಯೆ ಮತ್ತು ಕೃಷಿನ ಸರಿಯಾಗಿ ನಿಭಾಯ್‌ಸುವ ಶಕ್ತಿ ಇದ್ದರೆ ಬಾಳ್ ಬಂಗಾರತೇಳ್‌ದರ್‌ನ ಇಡೀ ಊರಿಗೆ ತೋರ್‌ಸಿಕೊಟ್ಟೊ.

✍ ಕೂಡಕಂಡಿ ಓಂಶ್ರೀ ದಯಾನಂದ

**ಹಿರಿಯರ್‌ನ ಮಾತಾಡ್ಲೊಕು.....**

ಯಾವ್ದೇ ಬಾಸೆ ಪ್ರತೀ ಹತ್ತ್ ಕಿ.ಮೀ ಗೆ ಹಂಞ ಬದಲಾದೆ. ಬದಲಾಗುವ ಪದಗಳ ಬದಲಾವಣೆ ಮಾಡದೆ ಜನ ಬಳಸ್ತಾ ಇರುದರ ಕಾಂಬಕ್. ಹಂಗೆ ಬಳ್ಸುದು ತಪ್ಪಲ್ಲ. ಬಾಸೆಲಿ ಮಡಿವಂತಿಕೆನ ಮಾಡ್ತಾ ಹೋದರೆ ಬಾಸೆ ಬೆಳೆದುಲೆ. ಹೊಸ ಪದಗ ಸೇರ್ತಾ ಹೋದಷ್ಟ್ ಬಾಸೆ ಬೆಳಿತಾ ಹೋದೆ. ಅದರ್ನ ಬಾಸೆ ಸಂಪತ್‌ತ್ತೇಳಕ್. ಹಂಗೆತ್ತೇಳ್ರೆ ಮೂಲ ಪದಗಳ ಬುಡೊಕುತ ಅಲ್ಲ. ಹಿರಿಯವು ತಮ್ಮ ಮಕ್ಕಳೊಟ್ಟಿಗೆ ಅವ್ವ ಬಾಸೆನ ಮಾತಾಡೊಕು. ಸಾಧ್ಯ ಆದಷ್ಟ್ ಮೂಲ ಪದಗಳ ಸೇರ್ಸಿಕಂಡ್ ಮಾತಾಡೊಕು.

ಎಂಬತ್ತ್ ತೊಂಬತ್ತ್ ವಯಸ್ಸ್ ದಾಟಿದವರೊಟ್ಟಿಗೆ ಮಾತಾಡಿರೆ ಅವರ್‌ಂದ ಅಚ್ಚ ಅವ್ವ ಬಾಸೆನ ಪದಗ ಸಿಕ್ಕಿವೆ.

-ಸಂ.

# ಮನೆ ಒಳಗೆನ ಅಪಾಯಗ

ಅರೆ! ಮನೆ ಒಳಗೆನೂ ಅಪಾಯ ಉಟ್ಟಾ? ಹೌದೌದು, ಅಪಾಯ ಉಟ್ಟೇ ಉಟ್ಟು. ಒಂದೆರ್ಡಲ್ಲ, ಲೆಕ್ಕ ಇಲ್ಲದಷ್ಟ್ ಉಟ್ಟು. ವಯಸ್‌ಪಟ್ಟವು ಮತ್ತೆ ಮಕ್ಕ ಇದ್ದಲ್ಲಿ ಎಚ್ಚರ ತಪ್ಪಿರೆ ಅಪಾಯ ಕಟ್ಟಿಸಿದ ಬುತ್ತಿ!

ದಿನದ ಕೆಲ್ಸ ಸುರಾದೇ ಅಡ್ಗೆ ಮನೆಂದ. ಅಪಾಯ ಸುರಾದೂ ಅಲ್ಲಿಂದಳೇ. ಸೌದೆ ಒಲೆ ಇರ್‌ಕನ ಒಂದು ತರ, ಗ್ಯಾಸ್ ಒಲೆ ಬಂದ ಮೇಲೆ ಮತ್ತೊಂದ್ ತರ. ಅಡ್ಗೆ ಮಾಡಿಕಂಡಿರಕನ ಸಾಮಾನ್ಯಾಗಿ ಮಕ್ಕ ಮನೆಲೆಲ್ಲ ಕಿಚ್ಚ್ ಕಾಸಿಕಂಡ್, ಪಂಚಾತಿ ಹೊಡ್ಕಂಡ್ ಕುದ್ದಿದ್ದವೆ. ಮಣ್ಣ್‌ನ ಪಾತ್ರೆಲಿ ಅನ್ನನೊ, ಗೈಪೊ, ಕಾಪಿನೋ ಕೊದಿತಿದ್ದದೆ. ಅನ್ನ ಬೆಂದಂಗೆ ಮಡ್ಕೆನ ಒಲೆಂದ ಇಳ್ಸಿ ಬಾಗೊಕು. ಒಂದ್ ಕಡೆ ಹಂಗೆ ಮಕ್ಕ ಒಲೆ ಮುಂದೆ ಕುದ್ದಿರಕನ ಅಯ್ಯೆ ಅನ್ನ ಬಾಗಿಕೆತ ಮಡ್ಕೆನ ಎತ್ತಿ ಮಕ್ಕಳ ತಲೆ ಮೇಲೆಂದ ದಾಟ್ಸಕನ ಮಡ್ಕೆ ಒಡ್ದೋಗಿ ಮಡ್ಕೆ ಬಾಯಿ ಅಯ್ಯೆನ ಕೈಲಿ. ಬಾಕಿ?!.. ಮುಂದೆ ಏನಾಗಿರ್ದು? ಹಂಗೆ ಎಷ್ಟೋ ಕಡೆ ಗೈಪು ಚೆಟ್ಟಿ, ಕಾಫಿ ತಪಲೆ ಇಳ್ಸಕನ ಎಚ್ಚರ ಇಲ್ಲದೆ ಆದ ಅನಾಹುತ ಒಂದೆರ್ಡಲ್ಲ. ಬೇಸಿಗೆ ಕಾಲಲಂತೂ ಜೋರು ಗಾಳಿ ಇರಕನ ಅಡ್ಗೆ ಆದಂಗೆ ಕೊಳ್ಳಿನ ಕೆಡ್ಸದೆ ಹೊರಗೆ ಹೋಗಿ ಬಾಕನ ಒಳಗೆ ಅಲ್ಲಿ ಇಲ್ಲಿ ಕಿಚ್ಚ್ ಹಿಡ್ದ್ ಅಪಾಯ ಆಗುಟು.

ಇನ್ನ್ ಗ್ಯಾಸ್ ಒಲೆ ಬಂದ ಮೇಲೆ ಆದ ಅಪಾಯ ಅಷ್ಟಿಷ್ಟಲ್ಲ. ಗ್ಯಾಸ್ ಲೀಕ್ ಆದು, ಸ್ಟವ್ ಮೇಲೆ ಬೇಯಕೆ ಇಸಿ ಹೊರಗೆ ಹೋದು, ಬಾಕನ ಸ್ಟವ್ ಕೆಟ್ಟಿದ್ದದೆ – ಗ್ಯಾಸ್ ಆಫ್ ಆತ್‌ಲೆ – ಮುಂದೆ? ಇಲ್ಲರೆ ಸ್ಟವ್‌ಲಿ ಇಸಿದ್ ಗ್ಯಾನ ಇಲ್ಲದೆ ವಾಪಸ್ ಬಾಕನ ಪಾತ್ರ ಸುಟ್ಟ್ ಕರಕಲಾಗಿ ಸುರುಟಿ ಮುರುಟಿ ಮನೆಲೆಲ್ಲಾ ವಾಸನೆ ಹರ್‌ಡಿ ರಂಪ ರಗಳೆ ಆದೂ ಉಟ್ಟು. ಕುಕ್ಕರ್ ಸಿಡ್ದ್ ಮೊಕ ಮೈಗೆಲ್ಲಾ ಗಾಯ ಆದುಟ್ಟಲ್ಲಾ?

ಹರ್ದಾಡುವ ಮಕ್ಕಂತು ಬಿಸಿ ಎಣ್ಣೆ ಚರಕ್‌ಗೆ ಕೈ ಹಾಕಿ ಅಪಾಯ ಮಾಡಿಕಂಡವೆ. ಗಲಾಸ್‌ಲಿದ್ದ ಬಿಸಿ ಕಾಪಿ, ಬಿಸ್‌ನೀರ್ ಚೆಲ್ಲಿಕಂಡ್ ಬೆಂದ ಗಾಯ ಮಾಡಿಕಂಡವೆ. ಇನ್ನ್ ಕತ್ತಿ, ಚಾಕ್, ಬ್ಲೇಡ್‌ಲಿ ಗಾಯ ಮಾಡಿಕಂಬವುಕೆ ಲೆಕ್ಕ ಇಲ್ಲೆ. ಕಟ್ಲ್‌ಂದ ಬಿದ್ದ ಮಕ್ಕ ಎಷ್ಟಿಲ್ಲೆ? ಮಕ್ಕಳ ಮೀಸಿದಂಗೆ ಅವರ ಪಾದದ ಚೆಂಡಿ ತೆಗೆದೆ ಎತ್ತಿ ತಂದ್ ಒಳಗೆ ಇಳ್ಸಿದಂಗೆ ನಡೆಕನ ಜಾರಿ ಬಿದ್ದವೆ. ಕೆಲ ಕಡೆ ಬಟ್ಟೆದ್ ಉಯ್ಯಾಲೆ ಸುತ್ತಿಕಂಡ್ ಅಪಾಯ ಆಗುಟು. ಇನ್ನ್ ಟಾನಿಕ್, ಸಿರಪ್‌ನೆಲ್ಲಾ ಗಟಗಟಾತ ಕುಡ್ದ್ ಆಸ್ಪತ್ರೆ ಸೇರ್ದ ಮಕ್ಕಳೂ ಒಳೊ. ಮೂಗೊಳಗೆ, ಕೆಮಿಗೆಲ್ಲಾ ಎಂತೆಂತದೊ ಕಾಯಿಗಳ್ನೋ, ಬೀಜಗಳ್ನೋ ತುರ್ಕಿಕಂಡ್ ಅಯ್ಯೆನ ಗೋಳಾಡ್ಸಿದ ಮಕ್ಕ ಎಷ್ಟೋ ಒಳೊ. ಪಾವಲಿ ನುಂಗಿದವೂ ಇಲ್ಲದಿಲ್ಲೆ.

ಇದೆಲ್ಲಾ ಮಕ್ಕಳ್ದ್ ಕತೆ, ಇನ್ನ್ ದೊಡ್ಡವ್? ಸೌದೆ ಕಣೆಂದ ಸೌದೆ ಎಳೆಕನ ಸೌದೆ ಮೊಕದ ಮೇಲೆ ಬಿದ್ದ್ ಮೂಗು ಮುರ್ಕಂಡವು, ಅತ್ತ ನೋಡಿ

ಇತ್ತ ತೆಗೆಕನ, ಇತ್ತ ನೋಡಿ ಅತ್ತ ಇಸಕನ ಆಯ ತಪ್ಪಿ ತಲೆ ಮೇಲೆ ಪಾತ್ರೆನೋ, ಕುಪ್ಪಿನೋ ಮತ್ತೊಂದನೋ ಬೀಳ್ಸಿಕಂಡ್ ಗಾಯ ಮಾಡಿಕಂಡವೇನೂ ಕಮ್ಮಿಯಿಲ್ಲೆ. ಕಟ್ಟಿಸಿದ ಒಂಟಿ ಹಲ್ಲ್ ಅಪ್ಲಕ್ಕಿ ತಿಂಬಕನೊ, ರೊಟ್ಟಿ ತಿನ್ನಕನೋ ನುಂಗಿ ಹೋಗಿ ದೊಂಡೆಲಿ ಸೆಕ್ಕಿಕಂಡ್ ಪಾಡ್ ಬಂದವೂ ಒಳೊ.

ಒಂದ್ ಕಾಲಲಿ ಮಣ್ಣೊಟ್ಟಿಗೆ ಬೆದ್ರ್ ಸೊಪ್ಪು ಸೇರ್ಸಿ ಕಲ್ಸಿ ಅಟ್ಟಕ್ಕೆ ಮಣ್ಣ್ ಹಾಕಿ ಸಾರ್‌ಸ್ತಿದ್ದೊ. ಮಣ್ಣ್ ಹಾಕಿ ಅದೆಷ್ಟೋ ವರ್ಷ ಆಗಿದ್ದದೆ. ಕ್ರಮೇಣ ಅಟ್ಟ ಕುಂಬಾಗಿ ಮಣ್ಣ್ ಸಮೇತ ತಲೆ ಮೇಲೆನೊ, ಎದೆ ಮೇಲೆನೋ ಬೀಳ್ತಿತ್ತ್.

ಸೂಚನೆ ಕೊಡದೆ ಮಕ್ಕ ಪಿಟಾಕಿ ಹೊಟ್ಸ್‌ಕನ ಮಲ್ಗಿದ್ದ ವಯಸ್‌ಪಟ್ಟವು ಹೆದ್ರಿ ಕಟ್ಲ್‌ಂದ ಬಿದ್ದವು ಒಳೊ;. ಉಂಬಕನ 'ತುಂಡು' ದೊಂಡೆಲಿ ಸಿಕ್ಕಿಕಂಡ್ ನರಕ ಬಾಕನ ಒಂದೋ ಬೆನ್ನಿಗೆ ಗುದ್ದಿ ಇಳ್ಸೊಕಾದೆ. ಇಲ್ಲರೆ ದೊಂಡೆಗೆ ಕೈ ಹಾಕಿ ಕಕ್ಕೊಕಾದೆ. ಸೆರೆ ಹತ್ತಿ ಕಣ್ಣ್ ಮೇಲಾದವೂ ಒಳೊ. ಎಲಡಿಕೆ ತಿಂಬಕನ ಸೆರೆ ಹತ್ತಿರೆ ಆತ್! ಇನ್ನ್ ಮೀನ್ ಗೈಮು ಊಟಲಿ ಮುಳ್ಳುದೇ ಕಷ್ಟ. ದೊಂಡೆಲಿ ಮುಳ್ಳು ಸೆಕ್ಕಿಕಂಡ್ ನರಕ ಬಾದುಟ್ಟು. ಕೊತ್ತಿ ಹಲ್ಲ್‌ಗೆ ಎಂತಾರ್ ಸೆಕ್ಕಿಕಂಡರೆ ಅದರ ಪಾಡ್‌ನ ನೀವೂ ನೋಡೊಳರಿ. ಹಂಗೆ ನಾವು ಉಂಬಕನ ಮುಳ್ಳು ಕುತ್ತಿಕಂಡರೆ ಅನ್ನ ಮುದ್ದೆನ ನುಂಗಿರೆ ಮುಳ್ಳು ಇಳ್ದದೆಗಡ. ಆದರೆ ಅನ್ನ ಉಂಡೆನೇ ಸೆಕ್ಕಿಂಡರೆ?

ಡೋಸ್ ಹಾಕವರ ಪಾಡ್ ಇನ್ನೊಂದ್ ರೀತಿ. ಒಮ್ಮೆ ಕುಡ್ದದ್ ಕೆಂದದಿದ್ದರೆ ಪುನಾ ಕುಡ್ದವೆ. ಹಂಗೆ ಒಬ್ಬ ಅರ್ಜೆಂಟ್‌ಲಿ ಗಟ ಗಟಾತ ಕುಡ್ದ್ ಮಲ್ಗಿತ್. ಸುರಾತದಾ ಎದೆ ಉರಿ, ಹೊಟ್ಟೆ ಉರಿ. ತಕಣಿ ಪೈಪ್‌ಲಿ ನೀರ್ ಹೋದಂಗೆ ಜುಲಾಬು! ಕಾಚುಳಿ ಕುಪ್ಪಿ ಮತ್ತೆ ಕಳ್ಳ್ ಕುಪ್ಪಿ ಒಂದೇ ಕಡೆ ಇತ್ತ್‌ಲ್ಲಾ ಅರ್ಜಂಟ್‌ಲಿ ಕುಡ್ದದ್ ಕಾಚುಳಿನ!

ಮೇಲೆ ಇಸಿದರ ತೆಗೆಕೆ ಸ್ಟೂಲ್ ಹತ್ತಿ ಬಿದ್ದವಿಲ್ಲೆನಾ? ಏಣಿಕಾಲ್‌ಂದ ಜಾರಿಬಿದ್ದವು, ಮೆಟ್ಟ್‌ಕತ್ತಿ (ಹೆರೆಮಣೆ) ಮೆಟ್ಟಿ ಗಾಯ ಮಾಡಿಕಂಡವು, ತರಕಾರಿ ಕುಯ್ಯಕನ ಬೆರಳ್ ಕೊಯ್ಕಂಡವು, ಒಗ್ಗರಣೆ ಹಾಕಿಕೆತ ಕಾದ ಎಣ್ಣೆಗೆ ಕಿಚ್ಚ್ ಹಿಡ್ದದ್, ಏನ್ ಎತ್ತತ ಗೊತ್ತಾಗದೆ ಅದ್ಕೆ ನೀರ್ ಹೊಯ್ದ್ ಆದ ರಂಪ.... ಹೇಳಿಕೆ ಹೋದರೆ ಅದೆಷ್ಟೋ ಉಟ್ಟು ಒಗ್ಗರಣೆ ಕತೆ.

ಆಹಾ! ಇನ್ನ್ ಟೈಲ್ಸ್ ಹಾಕಿದ ಮನೆಗಳೊ....! ಜಾರಿ ಬಿದ್ದವರ್ದೇ ಕತೆಗ. ಇಂದ್ ಗುಡ್ಡ, ಬಚ್ಚಲ್ ಮನೆತ ಹೇಳ್ವ ಹೆಸ್ರೆಲ್ಲಾ ದೂರ ಆಗ್ತಾ ಉಟ್ಟು. ಈಗ ಬಾತ್‌ರೂಂ ಕಮ್ ಟಾಯ್ಲೆಟ್‌ತೇಳ್ದೇ ಫೇಮಸ್. ಅಲ್ಲೂ ಟೈಲ್ಸ್‌ದೇ ಪೋರ್ಲು. ಸಾಬೂನು, ಎಣ್ಣೆ ಪಸೆ ಇದ್ದಲ್ಲಿ ಜಾರಿ ಬೀಳಿಕೇನ್ ಕಷ್ಟ? ಪುಸ್ಕತ ಬೀಳ್ದೇ.

ಹಿಂಗೆ ಮನೆ ಒಳೆಗೆನ ಅಪಾಯಗ ನೀವಿಗೆ ಇನ್ನೆಷ್ಟೋ ಗೊತ್ತಿರ್ದು. ಇನ್ನೊಮ್ಮೆ ನೀವ್ ಸಿಕ್ಕಕನ ಆ ಕುರ್ತ್ ಕಾತಾಡ್ನೋಲಾ....

✍ ಬಾರಿಯಂಡ ಜೋಯಪ್ಪ

# ಬದ್ಲಾವಣೆ

ಒಂಬತ್ತ್ ತಿಂಗ ತುಂಬಿದ ತುಂಬು ಬೊಸ್ರಿ ವೇದಾ ಹಾಸಿಗೆಲಿ ಮಲ್ಕಂಡ್ ಒದ್ದಾಡ್ತಿತ್ತ್. ಹೆರಿಗೆ ಬೇನೆಲಿ ಅಲ್ಲ; ಮನಸ್ನ ಬೇನೆನ ಒದ್ದಾಟ. ತನ್ನ ತೌರುನ ಬಯಕೆನ, ಮಾತ್ ಮಾತಿಗೆ ಹಾರ್ಯಾಡುವ ಒರ್ಟ ಗಂಡನೊಟ್ಟಿಗೆ ಹೇಂಗೆ ಹೇಳ್ದೂಂತ ಒದ್ದಾಡ್ತಿತ್ತ್. ಸುರುನ ಹೆರಿಗೆ ತೌರು ಮನೇಲೆ ಆದು ಹಿರೆವರ ಪೊದ್ದತಿ. ಅದರಾಂಗೆ ತೌರು ಮನೆಗೆ ಹೋಗಿ ಹೆತ್ತವ್ವನ ಕೈಲಿ ಬಾಣಂತನ ಮಾಡ್ಸಿಕಂಬ ಸುಖ ಸಂತೋಸನ ಮನಸ್ಲೇ ಗ್ರೇಸಿಕಂಡ್ ಕುಸಿ ಪಡ್ತಿದ್ದ ಹೆಣ್ಣ್. ತೊಬ್ಬಿ ಉಬ್ಬಿದ ಹೊಟ್ಟೆಮೇಲೆ ಕೈಯಾಡ್ಸಿ "ತುಂಬಾ ಬೊಚ್ಚಿದೆನ ನನ್ನ ಚಿನ್ನಾ" ಇನ್ನೇನ್ ಹಂಞನೇ ದಿನ ನೀ ಈ ಕಸ್ಟನ ಸೆಯಿಸಿಕಂಡರೆ ಆತ್, ನಮ್ಮ ಪ್ರೇಮದ ಕೊಡಿ, ರಾಜಕುಮಾರನ ಅವತಾರ ಆದೆ ಅಲ್ಲಾ "ಅಸ್ಟ್‌ಮುಟ್ಟ ಹೇಂಗಾರ್ ಸೆಯಿಸಿಕಾ"ಂತ ಹೇಳ್ದ ಗಂಡನ ಪ್ರೀತಿನ ಮಾತ್ಗೆ ಸೋತ ವೇದಾ ಇದೇ ಸೆರಿಯಾದ ಸಮೆಂತ "ಅಪ್ಪನ ಕಾಗದ ನೋಡ್ದರಿಯಾ? ಹೆರ್ಗೆಗೆ ತೌರುಗೇ ಹೋಕಡ, ನನ್ನ ಬಾಣಂತನನ ಅವ್ವನೇ ಮಾಡುವೆಗಡ, ನಂಗೂ ತೌರುಗೆ ಹೋಕೆ ಕುಸೀಂತ" ಒಂದೇ ಉಸುರುಗೆ ಎಲ್ಲಾ ಹೇಳಿ ಗಂಡನ ಮೋರೆ ನೋಡ್ತ್ ವೇದಾ. ಅವನ ಮೋರೆನೋ ಬತ್ತ ಹಾಕಿರೆ ಹೊದ್ರಿ ಹೋವಾಂಗೆ ಸಿಟ್ಟ್ಲಿ ಕೆಂಪು ಕೆಂಪು ರಟ್ಟಿದೆ. ಅಂವ ಸಿಟ್ಟ್ಲಿ "ನಿಂಗೆ ನಿನ್ನ ದರಿದ್ರ ತೌರುನ ನೆಂಪು ಮಾಡಿಕಣದಿದ್ದರೆ ನಿದ್ದೆನೇ ಬಾದುಲ್ಲೆ ಅಲ್ಲಾ? ಎಂತ ಉಟ್ಟು ನಿನ್ನ ತೌರುಲಿ ಮೊಣ್ಣು? ಸೆರಿಯಾಗಿ ಒಂದು ಉಂಬಕೆ ತಿಂಬಕೆ ಗೆತಿಯಿಲ್ಲೆ. ಆ ದರಿದ್ರದವರ ಮಗ ನನ್ನ ಹೆಣ್ಣ್ಂತ ಹೇಳಿಕಣಿಕೇ ನಾಚಿಕೆ ಆದೆ? ಅವು ನಿನ್ನ ಹೆರಿಗೆ, ಬಾಣಂತನ ಮಾಡುವೆ ಗಡ" ಹೆಣ್ಣ್ ಮಕ್ಕಳಿಗೆ ತೌರುನ ಹಂಬಲ ಪ್ರೀತಿ ಹೇಂಗೆ ಇದ್ದದೇಂತ ಹೇಳುವ ಸೊಯೆನೇ ಇಲ್ಲದ ಗಂಡನ ಮಾತಿಗೆ ಕಂಗಾಲಾಗಿ ಮೋರೆ ಅಡಿಗೆ ಹಾಕಿ ಬಂದ ಕಣ್ಣೀರ್ನ ಗಂಡಂಗೆ ಗೊತ್ತಾಗದಾಂಗೆ ಒರ್ಸಿಕಂತ್.

ವೇದಂಗೆ ಗಂಡನ ಇಂತಾ ಒರ್ಟ್ ಮಾತ್ ಇದ್ ಹೊಸ್ತೇನ್ ಅಲ್ಲಾ. ಮೊದುವೆ ಆಗಿ ಈ ಮನೆ ಹತ್ತಿದಲ್ಲಿಂದನೂ ಈ ಹಂಗ್ಸಾಟ, ಸಸಾರ ಹೀಯಾಳ್ಸಾಟ ಕೇಳಿ ಕೇಳಿ ಕಿಬಿ ಬೊಡ್ಡ್ಕಟ್ಟಿಟ್ಟು. ಬಡವನ ಮಗಾಂತ ಹಂಗ್ಸುವ ಗಂಡ, ಅನಿಸ್ಟನ ಕಾಂಬ ಹಾಂಗೆ ಆಡುವ ಅತ್ತೆ. ಯಾವುದೋ ಲೋಕಲಿರುವವರ ಹಾಂಗೆ ಯಾರೊಟ್ಟಿಗೂ ಯಾವ ತಕ್ರಾರ್ ಇಲ್ಲದೆ ತನ್ನಸ್ಟಕ್ಕೇ ಇರುವ ಮಾಂವ, ಇಂತಾ ಹೊಸ ಲೋಕಕ್ಕೆ ಬಂದ್ ಬಿದ್ದೆಲ್ಲಾ; ಇದ್ದವರ ಮನೆ ಸೇರೊಕು, ಎಲ್ಲರ ಮುಂದೆ ಗತ್ತ್‌ಲಿ ಓಡಿಯಾಡೊಕೂಂತ ಗ್ರೇಸಿದಕ್ಕೆ ಹೀಂಗಾತಲೇಂತ ಹೇಳ್ವ ಚಿಂತೆ ಒಂದು ಕಡೆ. ಆದರೆ ಇವರ ನಾ ಗೆದ್ದೇ ಗೆಲ್ಲೊಕು ಗೆದ್ದೇ ಗೆದ್ದನೆ ನನ್ನ ವಿದ್ಯೆ ಇವರ ಒಂದು ದಿನ ಸೋಲ್ಸುದೂಂತ ಗ್ರೇಸಿಕಂಡ್ ಇರ್ಕನ ವೇದನ ಮನ್ಸ್ ಹಿಂದೆ ಓಡ್ತ್. ನೆಂಪುಗಳ ಜೊಂಪೆ ಒಂದೊಂದಾಗಿ ಕಾಂಬಕೆ ಸುರು

ಆತ್. ಗಿಣಿನ ಗೂಡುನಾಂಗೆ ಇದ್ದ ಒಂದು ಸಣ್ಣ ಮನೆ, ಮುಂದೆ ಸೆಗ್ಣಿ ಗುಡ್ಸಿದ ಅಂಗಳ. ನೊಡುಲಿ ಒಂದು ತೊಳ್ಸಿಕಟ್ಟೆ, ಕರೆಲಿ ಸುತ್ತೊಳು ಹೂನ ಸಾಲ್ಗ. ನಾನೇ ನೆಟ್ಟ್, ಬೆಳ್ಸಿದ ಹಬ್ಬಂತಿಗೆ, ಗುಲಾಬಿ, ದಾಸಳ, ಗೊರಟೆ ದೈಗ, ಮಲ್ಲಿಗೆ ಬೊಳ್ಳಿ. ಅಂಗಳದ ಕರೇಲಿ ಒಂದು ಬಾಂಮಿ. ಅದರ್ಲಿ ಕುಡಿಯಕೆ ಬೆಂಡದ ನೀರ್ನಾಂಗೆ ಇರುವ ನೀರ್. ಅಲ್ಲಿ ಹೋಬಡ, ಇಲ್ಲಿ ಬರ್ಬಡ, ಹಾಂಗೆ ಮಾಡ್ಬಡ, ಹೀಂಗೆ ಮಾಡ್‌ಂತ ಯಾವ ಕಟ್ಟಾಪ್ಡ್ ಇಲ್ಲೆ, ಸ್ವಚ್ಚಂದ, ಸೊಸಂತ್ರ. ಪ್ರೀತಿ, ಪ್ರೇಮನ ಮನ್ಸಾರೆ ಉಣ್ಸಿದ ಅಪ್ಪ, ಅಮ್ಮ, ಒಟ್ಟಿಗೆ ಹುಟ್ಟಿದವು. ಬಾರಿ ಸಡಗರ ಇಲ್ಲರೂ. ಉಂಬಕೆ ತಿಂಬಕೆ ಹಂಜ ಕಮ್ಮಿ ಇದ್ದರೂ ಪ್ರೀತಿಗೆ ಕೊರ್ತೆ ಇಲ್ಲದೆ ಬೆಳ್ದ ನಾ ಇಂದ್ ದೊಡ್ಡಸ್ತಿಕೆನ ಚಿನ್ನದ ಸಂಕೋಲೆಲಿ ಬಂಧಿ; ತುಂಬಿದ ಸಂಸಾರಲಿ, ಪ್ರೀತಿನ ತೊಂಪುಲಿ ಬೆಳ್ದ ನನ್ನ ಒಂದು ಮಾಣಿಕ್ಯದಾಂಗೆ ಕಾಂಬೊತ್ತಿದ್ದೊ. ಎಂ.ಎಸ್ಸಿ. ಪಾಸಾದ ಸಿಂಯಿ ಸುದ್ದಿ ಗೊತ್ತಾದ ಅಣ್ಣ ಅಂಗ್ಡಿಂದ ಮೈಸೂರು ಪಾಕ್ ತಂದ್ ಎಲ್ಲರ ಪಾಲ್ನೂ ನನ್ನ ಬಾಯಿಗೇ ತುರುಕ್ತಿತ್. ನಿನ್ನ ಮೊದುವೆ ಮಾಡಿ ಬೇರೆ ಮನೆಗೆ ಕಳ್ಸುದೇ ಇಲ್ಲೆ. ನೀ ನಮ್ಮ ಮನೆನ ಕೀರ್ತಿ ಪತಾಕೆ. ಮೊದುವೆ ಮಾಡಿ ಬೇರೆ ಮನೆಗೆ ಕಳ್ಸಿರೆ ನಮ್ಮ ಕೀರ್ತಿ ಪತಾಕೆ ಆ ಮನೆಲಿ ಹಾರಾಡ್ದುಂತ ತಮಾಸೆ ಮಾಡ್ತಿತ್. ಉಡುಪಿನ ಎಂ.ಜಿಎಂ. ಕಾಲೇಜ್ಲಿ ಲೆಕ್ಚರ್ ಆಗಿ ಕೆಲ್ಸ ಸಿಕ್ಕ್‌ಕನ ಅಸ್ಟು ದೂರ ಕಳ್ಸುದು ಹೇಂಗೇಂತ ಪೇಚಾಡ್ತಿದ್ದ ಅವ್ವಂಗೆ ದೈರ್ಯ ಹೇಳಿ, ಉಡುಪಿಗೆ ಕರ್ಕಂಡ್ ಹೋಗಿ ಬೇಕಾದ ವೆವಸ್ತೆ ಮಾಡಿ ಬಂದವ ಅಣ್ಣ. ನಮ್ಮೂರ್ಲಿ ನಾ ಒಬ್ಬಳೇ ಎಂ.ಎಸ್ಸಿ. ಪಾಸ್ ಮಾಡ್ದವ್ಳೂಂತ ಹೆಮ್ಮೆ ಬೇರೆ.

ನೆನ್ಪಾಂಗೆಲ್ಲಾ ವೇದಂಗೆ ನೆನ್ಪುನ ಸುರುಳಿ ಒಂದೊಂದಾಗಿ ಬಿಚ್ಚಿಕಂಬೊತ್ತಿತ್. ವರ್ಸದ ಹಿಂದೆ ಮೊದುಮಗಳ ಉಡ್ಗೆ ತೊಡ್ಗೆಲಿ ಅಂತರ ಪಟದ ಹಿಂದೆ ಹೂಮಾಲೆ ಹಿಡ್ದ್ ನಿತ್ತ ವೇದಾ ಪರ್ದೆ ಸರಿಯಕನ ಮೊದುಮಗನ ದೃಸ್ಟಿತಾಂಗಿ ಎದುರ್ಸುವ ದೈರ್ಯ ಸಾಲದೆ ನೆಲನ ನೋಡಿ ಈ ಲೋಕನ ಮರ್ತತ್. ಭಟ್ರ ಮಂತ್ರದೊಟ್ಟಿಗೆ ಕರಿಮಣಿ ತಾಳಿ ಕುತ್ತಿಗೆನ ಅಲಂಕರ್ಸಿಕನ ಏನೋ ಒಂದು ರೀತಿನ ಕುಸಿಯೋ ಕುಸಿ.

ಮೊದುವೆ ಮಂಟಪದ ಸುತ್ತಮುತ್ತ ನಿತ್ತ್‌ಕಂಡಿದ್ದ ತಮ್ಮೊವರ ಕಣ್ಣ್ ತುಂಬಿ ಬಂದಿತ್. ಅಂವರೆಲ್ಲಾ ಬುಟ್ಟ್ ಹೋಕಲ್ಲಾಂತೇಳೂವ ಕಸಿವಿಸಿ, ತಳಮಳ ವೇದಂಗೆ. ದಾರೆ ಎರ್ದ್ ಕೊಡ್ಕನ ಅಪ್ಪನ ಕಣ್ಣ್ಂದ ತೊಟ್ಟಿಕ್ಕಿದ ಹನಿ ದಾರೆ ಹೊಯ್ಯುವ ಪವಿತ್ರ ನೀರ್ಲಿ ಸೇರಿ ಹೋದರ ಕಂಡ್ ಅಳ್ಗೇಲ್ ತಡಿಯಕೆ ಆತ್ಲೆ. ಇನ್ನು ಹೆಣ್ಣೊಪ್ಸಿ ಕೊಡ್ಕನ ಹಾಡ್ದ ಸೋಬಾನೆ "ಎಮ್ಮ ಮನೆಯಂಗಳದಿ ಬೆಳೆದೊಂದು ಹೂವನ್ನು...." ಂತ ಹಾಡ್ಕನ ದುಃಖ ಉಮ್ಮಳ್ಸಿ ಬಾತ್. "ಹೆತ್ತವರ ಮನೆಗಿಂದು ಹೊರಗಾದೆ ನೀ ಮಗಳೇ...." ತನ್ನವರ ಪ್ರೀತಿಯ ಬಂಧನಂದ ಪೂರಾ ಕಳ್ಚಿಕಂಡೆನೋಂತ ಅನ್ಸಿತ್. ಅವ್ವನ ಕಾಲ್ ಹಿಡಿಯಕನ ಹಿಡ್ದ್ ಎತ್ತಿ... "ಸುಖಲಿ

ಬಾಳ್ ಕಂದಾ...."ಂತ ಹೇಳ್ಕನ ಅವ್ವನ ಎದೆಲಿ ಮೋರೆ ಹುದುಗ್ಸಿ ಮರ್ಟತ್. ಹಾಲ್ ಕುಡಿವ ಕರ್ನ ಎಳ್ದ್ ಹಸುಂದ ಬೇರೆ ಮಾಡ್ದಾಂಗೆ ತನ್ನವರ್ನೆಲ್ಲಾ ಬುಟ್ಟು ಬಾಕೆ ಮನ್ಸಿಲ್ಲರೂ ಬುಟ್ಟು ಬರೋಕಾಕನ ಮರ್ಟ್ಕಂಡ್ ಗಂಡನ ಮನೆ ಸೇರ್ತ್ ವೇದಾ.

ಸೊಸೆ ಬೊಸ್ರಿಂತ ಗೊತ್ತಾಕನ ಕುಸಿಪಡೊಕಾದ ಅತ್ತೆ "ಯೆಸ್ಟ್ ಅಂಬೆರ್ಪು, ನಾವೆಲ್ಲಾ ಆರ್ ತಿಂಗ ಆದರೂ ಗಂಡನ ಮೋರೆ ನೋಡಿತ್ಲೆ, ಕಾಲ ಕೆಟ್ಟ್ ಹೋತ್"ಂತ ಪರಿಂಚಿದರ ಕೇಳಿ ಭೂಮಿ ಬಾಯಿ ಬುಟ್ಟ್ ನುಂಗಿದರೇಂತ ಕಾಂಬೊತ್ತಿತ್ತ್. ಗಂಡ ಏನೋ ಪುಣ್ಯಕ್ಕೆ ತನ್ನ ಉರಿ ಮುಸುಂಡ್ನ ಸಿಟ್ನ ಬುಟ್ಟ್ ನೆಗೆ ಮೋರೆಲಿ ಮಾತಾಡ್ಸುದರ ಕಂಡ್ ಅತ್ತೆನ ಪರಿಂಚಾಟನ ಲೆಕ್ಕಕ್ಕೆ ತಕಂತ್ಲೆ. ಅದೇ ಸಮೆಕ್ಕೆ ವೇದನ ಥೀಸೀಸ್ಗೆ ಪಿ.ಎಚ್ಡಿ. ಘೋಷಣೆ ಆದ್ದರ್ಂದ ಗಂಡಂಗೆ ಕೊಂಬು ನೆತ್ತಿಲಿ ಮೂಡಿತ್ತ್. ಅವರ ಕುಟುಂಬಲಿ ಯಾರೂ ಪಿ.ಎಚ್ಡಿ. ಮಾಡ್ದೊವು ಇಲ್ಲದ್ದರ್ಂದ ಅತ್ತೆಗೂ ಒಳಗೊಳಗೇ ಕುಸಿಯಾಗಿ ಪರಿಂಚಾಟ ಕಮ್ಮಿ ಆತ್!

ಇತ್ತ ವೇದಾನ ದೊಡ್ಡಣ್ಣ ಅವ್ವನ ಮಾತ್ನಾಂಗೆ ಬೊಸ್ರಿ ಮಗಳಿಗೆ ಬಯ್ಕೆಂತ ಹಿಟ್ನ ಬುತ್ತಿ, ತಿಂಡಿಗ, ಹಣ್ಣು ಹಂಪಲ್ಗಳ ತಕಂಡ್ ಓಡೋಡಿ ಬಾತ್. ಇಲ್ಲಿಗೆ ಬಂದರೆ ಇವರ ಸಸಾರ, ಹಂಗ್ಸಾಟನ ಸೆಯಿಸೊಕಾತ್. ನಮ್ಮಂತವರ ಮನೆಲಿ ಇದಕ್ಕೆ ತಿಂಬಕೆ ಏನ್ ಕಮ್ಮಿ ಆಗುಟ್ಟು, ನಿಮ್ಮ ಹಾಳ್ ಕೊಂಪೆಂದ ಹಾಳ್ಮೂಳ್ ತಂದ್ ನಾವುಗೆ ಅವುಮಾನ ಮಾಡ್ಬಡೀಂತ ಹೇಳಿ ಅವನ ಹಿಂದನೇ ತಂದದರ ಕಾಡಿಗೆ ಇಡ್ತಿದ್ದೊ. ಈ ದೊಡ್ಡ ಮೊನ್ಸರ ಹಂಗ್ಸಾಟ ಕೊಂಕು ಮಾತ್ಗಳ ಕೇಳೀ ಒಪ್ಪೊತ್ತ್ ಉಂಬಕೂ ನಿಲ್ಲದೆ ಅಣ್ಣ ಪುಕುಳಿಗೆ ಕಾಲ್ ಕೊಟ್ಟತ್. ಅಣ್ಣನ ಚಪ್ಪೆ ಮೋರೆ, ಸೆರಿ ಮಾತಾಡ್ಸಿಕೂ ಆಗದೆ ಹೊರ್ಟ್ ಹೋದಂವನ ನೆನ್ಸಿ ವೇದಾನ ಹರ್ದಯ ಬೇನೆಂದ ಹಿಂಡಿಹಿಪ್ಪೆ ಆತ್. ತೌರು ಮನೆನ ಹಸಿಹಸಿಯಾದ ಸಿಂಯಿ ನೆನ್ಪುಗ ತಿರ್ಗಿ ಬಾರದ ಆ ರಸಗಳಿಗೆಗಳ ಮೆಲ್ಕ್ ಹಾಕ್ತಾ ಇದ್ದದಕ್ಕೆ ಹಾಂಗೆ ನಿದ್ದೆ ಹೋದ್ದೇ ಗೊತ್ತೇ ಇಲ್ಲೆ.

ಇದ್ದಕಿದ್ದಾಂಗೆ ಎಚ್ಚರಾತ್. ಹೊಟ್ಟೆಲಿ ತಡಿಯಕೆ ಬೊತ್ತದ ಬೇನೆ. ಸೊಂಟಲಿ ಒಂದು ಚಳ್ಳ್. ಅಣ್ಣ ಬಂದರ್ಂದ ಮೂಡ್ ಕೆಡ್ಸ್ಕಂಡ್ ತಿರ್ಗಿ ಮಲ್ಗಿದ್ದ ಗಂಡಂಗೆ ವೇದನ ನರಳಾಟಂದ ಎಚ್ಚರ ಆತ್. "ವೇದಾ ಏನಾತ್ ನನ್ನ ಬಂಗಾರ"ಂತ ಪ್ರೀತಿಲಿ ಮಾತಾಡ್ಸಿದೊ. ಕತ್ತಲೆಗಿದ್ದ ಕೋಪದ ಮೋಡ ತೆಲ್ಗಿ ಪ್ರೀತಿನ ತಂಗಾಳಿ ಬೀಸಿತ್. ಮನೆವು ಎಲ್ಲಾ ಆತುರ, ಕಾತುರಂದ ನೋಡ್ತಾ ಒಳೊ. ದೊಡ್ಡ ಆಸ್ಪತ್ರೆಲಿ ಯಮಯಾತನೆ ಅನ್ಬವಿಸಿ ಬೆಣ್ಣೆ ಮುದ್ದೆನಂತ ಗಂಡ್ ಕೂಸಿಗೆ ಜನ್ಮ ನೀಡ್ತ್ ವೇದಾ. ಚಂದನದ ಬೊಂಬೆನಾಂಗೆ ಇದ್ದ ಹಕ್ಕಲೆ ಮಲ್ಗಿಸ್ದ ಕೂಸುನ ಒಮ್ಮೆ ನೋಡಿ ಆಯಾಸಂದ ಕಣ್ಣ್ ಮುಚ್ಚಿತ್ ವೇದಾ.

ವೇದಾಂತ ಹೇಳ್ವ ವರ್ಟ್ ಸ್ವರದ ಬದ್ಲ್ ಮೃದು ಮಧುರ ಸೊರ ಕೇಳಿ ಯಾರಪ್ಪಾ ಇದ್ಂತ ಕಣ್ಣುಬಟ್ಟು ನೋಡ್ರೆ ಅತ್ತೆ. ಯಾಗೋಳು ಮೋರೆನ

ಕೆಂಬಡೆಕಾಯಿ ಮಾಡಿಕಂಡ್ ಉರಿಉರಿ ಉರ್ಕಂಡ್ ಇರುವ ಅತ್ತೆನ ಮೋರೆಲಿ ಸಣ್ಣ ನೆಗೆ ಕಂಡತ್. ಎದ್ರಿಕೆ ನೋಡ್ದ ವೇದನ ತೊಬ್ಬಿ ಹಂಞ ಮಲ್ಕ, ಎದ್ದ್ ಆಯಾಸ ಮಾಡಿಕಂಬಡಾಂತ ಮೆಲ್ಲೆ ಮಲಗ್ಸಿದೊ. ಮೊರ್ಟ್ ಕಣ್ಣೀರ್ ಕರೆಕಟ್ಟಿ ಬಿಳ್ಚಿಕಂಡಿದ್ದ ಮೋರೆ ಪೂಜಿ ನನ್ನ ಮನೆನ ಮಾಲಕ್ಷ್ಮಿ ನೀ, ಮೆನೆನ ಬೆಳ್ಗಿಸಿದ ಬಾಗ್ಯದೇವತೆ, ಕುಲದೀಪಕನ ಹೆತ್ತ ಸೌಭಾಗ್ಯವತಿ ಎದ್ರ್ಬೇಡ ಮಲ್ಗಿ ವಿಸ್ರಾಂತಿ ತಕಂತ ಹೇಳ್ಕನ ಇದ್ ಕನ್ಸಾ, ನನ್ಸಾಂತ ಆಸ್ಚರ್ಯ ಆತ್ ವೇದಂಗೆ. ಹಕ್ಕಲೆ ಕುದ್ದಿದ್ದ ವೇದನ ಅವ್ವನ ಮೋರೆ ಕುಸಿಲಿ ಅರ್ಳಿತ್. ಅಪ್ಪ ಆದ ತೃಪ್ತಿ ಹಾಂಗೂ ಗತ್ತ್‌ಂದ ವೇದನ ಒಮ್ಮೆ ಪ್ರೀತಿಲಿ ನೋಡ್ದ ಗಂಡನ ನೋಟಕ್ಕೆ ಹೆಣ್ಣ್ ಬೊದ್ಕು ಸಾರ್ತಕ ಆತ್‌ಂತ ಗ್ರೇಸಿಕಂಡ್ ಕಣ್ಣುಮ್ಚಿ ಮಲ್ಗಿತ್ ವೇದಾ.

✍ ಪಿ.ಜಿ. ಅಂಬೆಕಲ್




ಕವನ

## ಪುಸ್ತಕ

ಹಿಂಗಾರ ಪುಸ್ತಕಲಿ ಬಂಗಾರದ ಕತೆಗ,
ಓದಿಕೆ ಸುರು ಆತ್ ತ ಗ್ಯಾನ ಮಾಡಿಕಣಿ ಆಗ ನೋಡಿ,
ಅದರ ರಸನೇ ಬ್ಯಾರೆ ತುಂಬ ಕುಷಿ ಆದೆ.
ಮನೆಗೆ ಹಿಂಗಾರ ಬಾರದಿದ್ದರೆ ಮನ್ಸ್ ಭಾರ ಆದೆ.
ಅಡಿಕೆ ಮರಲಿ ಮಾತ್ರ ಕಾಂಬತ್ತಿತ್ ಹಿಂಗಾರ.
ಈಗ ಹಂಗೆ ಅಲ್ಲ ಮೂರು ತಿಂಗಳಿಗೆ ಅಂಚೆಲಿ ಬಂದದೆ ಹಿಂಗಾರ
ಪುಸ್ತಕಲಿ ಬರ್ದಿರುವ ಹತ್ತಾರ್ ವಿಷಯಗಳ ಸಾರ,
ಮನೆ ಮದ್ದ್‌ನ ಮಾಹಿತಿನ ಓದ್‌ಕನ ಕಳ್ದದೆ ಮನ್ಸ್‌ನ ಭಾರ.
ಗಾದೆ ಮಾತ್‌ನ ಗಮ್ಮತ್ತ್ ಓದ್‌ಕನ ಮನ್ಸ್‌ಲಿ ಒಂತರ ಗತ್ತ್,
ಅರೆಗಾಲ ಆಗಲಿ, ಮಳೆಗಾಲ ಆಗಲಿ ಬರಿಯಕೆ ಯಾಗೋಳು ಒಳ್ಳ ಕಾಲ
ಈಗಂತು ಹೇಳ್ದೆ ಬ್ಯಾಡ ಬರವಣಿಗೆಯ ಕಾಲ
ವಿಶ್ವಕ್ಕೆ ಹರ್‌ಂಡಿದ ಈ ಕೊರೊನಾದ ಕಾಲ
ಓದುವವುಕೆ ಯಾಗೋಳು ಪುಸ್ತಕನೆ ಬೊದ್‌ಕ್‌ನ ಬಂಗಾರ
ಪುಸ್ತಕದೊಳಗೆ ಪದಗಳದೇ ಶೃಂಗಾರ
ಓದುಗರ್ ಯಾಗೋಳು ಒಳ್ಳೊಳ್ಳ ಪುಸ್ತಕ ಓದಿರೆ ಮನ್ಸ್ ಹಗುರ
ಹಿಂಗಾರಕ್ಕೆ ನನ್ನ ಹೃದಯ ತುಂಬಿದ ನಮಸ್ಕಾರ

✍ ಎಸ್.ಕೆ. ಈಶ್ವರಿ

(ಬನ್ನಿ ಓದೋಮೊ)

## ಪೂರ್ಣಚಂದ್ರ ತೇಜಸ್ವಿಯವರ ಜುಗಾರಿ ಕ್ರಾಸ್ ಕಾದಂಬರಿನ ಒಂದು ಕಂಡಿಕೆ

ಮಾತ್, ಬಾಸಣ, ನಟನೆ ಹಿಂಗೆ ಬೇರೆ ಬೇರೆ ರೀತಿನ ಅಭಿವ್ಯಕ್ತಿನ ಮೂಲಕ ನಮ್ಮ ವಿಚಾರಗಳ್ನ ವಿನಿಮಯ ಮಾಡಿಕಣಕ್. ಆದರೆ ನಮಿಗೆ ಗೊತ್ತಿರುದರ್ನ ನಮಿಗೆ ಅನ್ನಿದ್ದನ್ನ ಉಳ್ದವ್ಕೆ ತಿಳ್ಸಿಕೆ ಇರುವ ಒಂದು ಪರಿಣಾಮಕಾರಿ ಮಾಧ್ಯಮ ಹೇಳಿರೆ, ಅದು ಬರವಣಿಗೆ. ಈಗಂತೂ ಆಧುನಿಕ ಪ್ರಪಂಚಲಿ ತಂತ್ರಜ್ಞಾನದ್ದೇ ಮೇಲುಗೈ. ಅದು ಬೇರೆ ಬೇರೆ ರೀತಿಯಾದಂತಹ ಫೇಸ್ ಬುಕ್, ವ್ಹಾಟ್ಸಪ್‌ನಂತಹ ಸಾಮಾಜಿಕ ಜಾಲತಾಣಗ ಇರ್ದು. ಇವೇ ಇಂದ್ ನಮ್ಮ ಶಕ್ತಿ ಶಾಲಿ ಬರವಣಿಗೆನ ಮೂಲಧಾತು. ಒಟ್ಟಿಗೆ ಇದ್ ನಮ್ಮ ಬರಹಗಾರರ್ ಯಾವ ಮೂಲೆಲಿಯೇ ಇರಲಿ, ಅವನ್ರೂ, ಬರವಣಿಗೆನೂ ಸುಲಭಕ್ಕೆ ಪರ್ಚಯಿಸುವಂತ ಒಂದು ದೊಡ್ಡ ವೇದಿಕೆ. ಬರವಣಿಗೆ ಹೇಳುವಂತದ್ದು ಒಂದು ತುಡಿತ ಹಂಗೆ ಬಿಡುಗಡೆಯ ದಾರಿನೂ. ಹಂಗಾಗಿ ಒಬ್ಬ ಬರಹಗಾರಂಗೆ ಸಣ್ಣಕೆಯೋ, ದೊಡ್ಡದಾಗಿಯೋ, ಒಟ್ಟು ಏನಾರ್ ಬರಿಯೋಕೆ. ಇದೊಂದು ರೀತಿಲಿ ಚಡಪಡಿಕೆ ಇದ್ದಂಗೆ. ಹಿಂಗಾಗಿ ಈ ಕಾಲಲಿ ಕೂಡ ಬರಹಗಾರರಿಗೆ ಆಧ್ಯತೆ ಉಟ್ಟೇ ಉಟ್ಟು. ಒಂದು ಸಣ್ಣ ಅನಿಸಿಕೆಯಿಂದ ಹಿಡ್ದ್, ಚುಟುಕು, ಕತೆ, ಕವಿತೆ, ಕಾದಂಬರಿ ಅಂತ ಇದರ ಆಳ ಅಗಲ ತುಂಬಾ ದೊಡ್ಡದಾಗಿ ಹರಡಿಟು. ಒಬ್ಬ ಬರಹಗಾರಂಗೆ ಓದು ಮತ್ತೆ ಅನುಭವ ತೀರಾ ಮುಖ್ಯ. ಸಮಾಜದೊಟ್ಟಿಗೆ ನಾವು ಬೆರಿಯೊಕು, ಆಗ ಮಾತ್ರ ನಾವು ನಮ್ಮ ಬರವಣಿಗೆಲಿ ಹೊಸತೇನೋ ಕೊಡಿಕೆ ಸಾಧ್ಯ. ಓದುಗನನ್ನ ತನ್ನ ವಸಕ್ಕೆ ತೆಗೆದ್‌ಕಣುವಂತಹ ಬರವಣಿಗೆ ಶೈಲಿ ನಮ್ಮದಾಕು. ಅದಕ್ಕೆ ನಮಿಗೆ ಒಂದು ಭಾಷೆಯ ಮೇಲೆ ಹಿಡಿತ ಬೇಕಾದೆ. ಆಗ ಒಂದು ಭಾಷೆನ ದುಡ್ಸಿಕಣುವಂತ ನೂರಾರು ಸಾಧ್ಯತೆಗ ನಮಿಗೆ ಸಿಕ್ಕುವೆ. ಅಂತ ಹಿಡಿತ ನಮಿಗೆ ನಿರಂತರ ಉತ್ತಮವಾದ ಓದಿನ ಮೂಲಕ ಅಷ್ಟೇ ಪಡ್ಕಣಿಕೆ ಸಾಧ್ಯ. ಗಟ್ಟಿ ಲೇಖಕರ ಗಟ್ಟಿ ಬರಹಗಳ್ನ, ಟಿಪ್ಪಣಿಗಳ್ನ ಓದುದರ್‌ಂದ ನಮಿಗೆ ಸಾಹಿತ್ಯ ಲೋಕದ ಒಳಗೆ ನುಗ್ಗಿಕೆ ದಾರಿ ಬಾಳಾ ಸುಲಬ. ಅದ್ ನಮ್ಮನ್ನ ಬರೆವಂಗೆ ಪ್ರೇರಣೆ ನೀಡ್ದು ಅಥವಾ ನಮ್ಮ ಬರಹ ಮತ್ತಷ್ಟ್ ಹದ ಪಾಕ ಆಕೆ ಸಹಕಾರಿ ಆದು. ನಮ್ಮ ಅರೆಬಾಸೆಲಿ ಒಳ್ಳೊಳ್ಳೆ ಕೃತಿಗ ತೀರಾ ಕಡ್ಮೆ ಉಟ್ಟು ಅನ್ನುವಂತ ಒಂದು ಹೇಳಿಕೆ ಉಟ್ಟು. ನಮ್ಮ ಹೈದಂಗ, ಗೂಡೆಗ ತುಂಬಾ ಪ್ರತಿಭೆ ಇರೋವು ಒಳೊ. ಅವು ಹೆಚ್ಚ್ ಹೆಚ್ಚ್ ಇತರ ಬಾಸೆಯ ಪುಸ್ತಕ ಓದುದರ ಮೂಲಕ ತಮ್ಮ ಜ್ಞಾನನ ವಿಸ್ತರಿಸ್ಕಂಡ್ ಅರೆಬಾಸೆಗೆ ಒಳ್ಳೆ ಕೃತಿಗಳ ನೀಡೋಕು ಹೇಳ್ದು ನಮ್ಮ ಆಸೆ. ಅದಿಕ್ಕಾಗಿಯೇ ನಾವು ಈ ಸಂಚಿಕೆಲಿ ಅಂಕಣ ರೂಪಲಿ ನಮ್ಮ ಕನ್ನಡ ಸಾರಸ್ವತ ಲೋಕದ ಸಾಹಿತಿಗಳ ಪ್ರಮುಖ ಕೃತಿಂದ ಕೆಲವು ಆಯ್ದ ಟಿಪ್ಪಣಿನ 'ಬನ್ನಿ ಓದೋನೊ' ತೇಳುವ ಅಂಕಣಲಿ

ತಂದ್ ನಿಮ್ಮ ಮುಂದೆ ಇಡ್ತೊತ್ಲೊ. ಈ ಸಂಚಿಕೆಲಿ ಪೂರ್ಣಚಂದ್ರ ತೇಜಸ್ವಿಯವರ ಜುಗಾರಿ ಕ್ರಾಸ್ ಕಾದಂಬರಿನ ಒಂದು ಕಂಡಿಕೆ ಕೊಟ್ಟೊಳೊ. ಆ ಮೂಲಕ ಹೊಸ ಓದಿಗೆ ತೊಡ್ಗಿಸಿಕಣಿಕೆ ಮಾಡ್ದು ನಮ್ಮ ಉದ್ದೇಸ. ಹೆಚ್ಚೆಚ್ಚು ಓದಿ. ಕಡ್ಮೆ ಬರಿಯನಿ. ಕಾಲಕಾಲಕ್ಕೂ ಅದು ಉಳ್ಕಣುವಂತಾಗಲಿ.

"ಸುರೇಶ ರಬ್ಬರ್ ತೋಟ ಮಾಡಲು ಕಾಡನ್ನೇನೋ ಕೊಂಡ. ಸುಮ್ಮನೆ ಹತ್ತು ಲಕ್ಷ ಬ್ಯಾಂಕಿನಲ್ಲಿ ಬಿಸಾಕಿದ್ದರೆ ಸುರೇಶನಿಗೆ ಹೊಟ್ಟೆಪಾಡಿಗೆ ತಕ್ಕಷ್ಟು ಬಡ್ಡಿ ಬರುತ್ತಿತ್ತು! ಅದು ಬಿಟ್ಟು ತೋಟ ಮಾಡಲು ಕಾಡು ಕೊಂಡಿದ್ದೆ ದೊಡ್ಡ ಅಚಾತುರ್ಯಕ್ಕೆ ಕಾರಣವಾಗಿದ್ದು. ಗಂಡ ಹೆಂಡತಿ ಇಬ್ಬರಲ್ಲಿ ಒಬ್ಬರಿಗಾದರೂ ಲೋಕಜ್ಞಾನ ಇದ್ದಿದ್ದರೆ ಹೇಗೋ ಇವರ ಸಂಸಾರ ನಾವಕೆ ಸುಗಮವಾಗಿ ಸಾಗುವ ಸಂಭವ ಇತ್ತು. ಆದರೆ ಇಬ್ಬರೂ ಒಂದೇ ತರದವರು. ಸುರೇಶನ ಕನಸುಗಾರಿಕೆಗೆ, ಹುಚ್ಚಾಟಗಳಿಗೆ ಮೆಚ್ಚಿಯೇ ಇವಳು ಅವನನ್ನು ಕಟ್ಟಿಕೊಂಡಿರಬೇಕಾದರೆ ಯಾರೇನು ಮಾಡಲು ಸಾಧ್ಯ? ಕಾಡು ಕೊಂಡಿದ್ದು ಹಾರುವ ಮಂಗಕ್ಕೆ ಏಣಿ ಹಾಕಿಕೊಟ್ಟಂತಾಗಿ ಇಬ್ಬರೂ ದಿನಕ್ಕೊಂದೊಂದು ಯೋಜನೆ ಹಾಕಿ ಕಾಡು ಕೊಂಡು ಉಳಿದಿದ್ದ ದುಡ್ಡಷ್ಟನ್ನೂ ಮಾಯ ಮಾಡಿದರು. ರಬ್ಬರ್ ಗಿಡ ಒಂದನ್ನು ಬಿಟ್ಟು ಮಿಕ್ಕಿದ್ದೆಲ್ಲಾ ಹಾಕಿದರು. ಸೀ ಐಲೆಂಡ್ ಕಾಟನ್ನು, ಕಾಶ್ಮೀರದ ಕಂಟೆಂಡರ್ ಬೀನ್ಸು, ಹಾಲೆಂಡಿನ ಆಲೂಗಡ್ಡೆ, ಆಫ್ರಿಕಾದ ಅಸ್ಸಿರಿಯಾ ಮ್ಯುಟುಂಡ ನೆಲಗಡಲೆ, ಇವುಗಳಲ್ಲದೆ ಕಾಶ್ಮೀರದಿಂದ ಕೇಸರಿ, ಸಿಲೋನಿನಿಂದ ದಾಲ್ಚಿನ್ನಿ, ಇನ್ನೂ ಎಂತೆಂಥವೋ ಪ್ರಯೋಗಗಳು ನಡೆದುವು. ಅವರ ಲೆಕ್ಕಾಚಾರದ ಪ್ರಕಾರವೇ ಎಲ್ಲಾ ನಡೆದಿದ್ದರೆ ಇಷ್ಟು ಹೊತ್ತಿಗೆ ಅವರಿಬ್ಬರೂ ಕೋಟ್ಯಾಧಿಪತಿಗಳೇ ಸರಿ. ಲೆಕ್ಕಾಚಾರಗಳನ್ನೆಲ್ಲ ಅವರು ಇನ್ನೊಬ್ಬರ ಬಾಯಿ ಮುಚ್ಚಿಸಲಿಕ್ಕಾಗಿ ಕೊಡುತ್ತಿದ್ದುದೇ ಹೊರತು ಅವರಾದರೂ ಅದನ್ನು ನಂಬಿದರೆ ಹೇಳಬರುವುದಿಲ್ಲ. ಜೊತೆಗೆ ಮಾಡಿದೆಲ್ಲ ಮಣ್ಣುಗೂಡಿತಲ್ಲ ಎಂದು ಒಂದು ಚೂರಾದರೂ ಬೇಸರವಿಲ್ಲದೆ ಒಂದನ್ನು ಕೈಬಿಟ್ಟು ಇನ್ನೊಂದು ಹುಚ್ಚಾಟ ಅವರು ಪ್ರಾರಂಭಿಸುತ್ತಿದ್ದುದನ್ನು ನೋಡಿ ಆಸುಪಾಸಿನವರಿಗೆಲ್ಲಾ ಓದಿದವರು ಮನೆ ಹಾಳುಮಾಡುತ್ತಾರೆಂಬ ನಾಣ್ಣುಡಿಯಲ್ಲಿ ಸಂಪೂರ್ಣ ನಂಬಿಕೆ ಬಂತು. ಆ ಕಾಡಿನಲ್ಲಿ ಬಿಸಾಡಿದಲ್ಲೆಲ್ಲಾ ಹುಟ್ಟಿಕೊಂಡು ಬೆಳೆಯುತ್ತಿದ್ದ ಏಲಕ್ಕಿ ಇಲ್ಲದಿದ್ದರೆ ಸುರೇಶನಿಗೆ ಹೊಟ್ಟೆಪಾಡಿಗೂ ತೊಂದರೆ ಇತ್ತೆಂಬುದರಲ್ಲಿ ಅನುಮಾನವೇ ಇಲ್ಲ. ಕೋತಿ, ಅಳಿಲು, ಹಕ್ಕಿ, ತಿಂದು ಹಿಕ್ಕೆ ಹಾಕಿದಲ್ಲೆಲ್ಲ ಏಲಕ್ಕಿ ಹುಟ್ಟಿ, ಧರ್ಮಕ್ಕೆ ದುಡ್ಡು ಸಿಕ್ಕ ಹಾಗೆ ಸುರೇಶನಿಗೆ ಸಿಗುತ್ತಿತ್ತು. ಆದರೆ ಎಷ್ಟು ದುಡ್ಡು ಬಂದರೂ ಏನುತಾನೆ ಪ್ರಯೋಜನ? ಅದು ಬರುವುದಕ್ಕೂ ಮೊದಲೆ ಅದಕ್ಕೆ ಬೇಕಾದಷ್ಟು ದಾರಿಗಳು ಇವರ ತಲೆಯೊಳಗೆ ರೆಡಿ ಇರುತ್ತಿದ್ದುವು".

ಹರಟೆ & ಹಾಸ್ಯ

# ಕುರೆನ ಕಿತಾಪತಿ......

ಹಳ್ಳಿಗಳಲ್ಲಿ ಬದುಕುವ ಜನಂಗ ಸಾಮಾನ್ಯವಾಗಿ ಕೃಷಿ, ತೋಟ, ಗದ್ದೆ ಬೇಸಾಯ ಬಾಳೆ, ಅಡಿಕೆ ಕೋಕ್ಕ, ಕಾಯಿ ತೋಟ ರಬ್ಬರು ನಟ್ಟಿಕಾಯಿ ಪೂರಾ ಬೆಳ್ದವೆ..

ನಾವು ಮಾಡ್ದದರ ಪೂರ ನಾವೇ ತಿಂಬಕಾಗದುತೇಳಿ ಕುಂಡಚ್ಚಗ, ಕುರೆಗ, ಪಾಂಜ ಆನೆಗ... ಚಣಿಲು ತೇಳಿ ಪೂರಾ ತಿಂದು ಲಗಾಡಿ ಕೊಡ್ತಾ ಇದ್ದವೆ...

ನಮ್ಮಲ್ಲಿ ರೋಡು ಸೈಡ್ ಆದರೂ ಕುರೆಗಳಿಗೆ ಗುಮಾನನೇ ಇಲ್ಲೆ....ರೋಡು ದಾಟುದೇನು.. ಮರಂದ ಮರಕ್ಕೆ ಹಾರ್ದುದೇನು ತುಂಬಿದ ಅಡಿಕೆ ಕೀಲೆಲಿ ಕುದ್ದು ಪೂರಾ ಉದುರಿಸಿಕಂಡು ಗಜ ಗಜ ಸಬ್ದ ಮಾಡಿಕಂಡು ಎಲ್ಲ ಬುಡಿ ಜನಂಗಳ ಹೆದರಿಕೆನೆ ಇಲ್ಲದೆ ಮಾಡ್ ಮೇಲೆ ಕುದ್ದು ಬೊಂಡ ತಿಂದು ಬುಡ್ಕ ಹೊತ್ತು ಹಾಕುಕನಾ ಸಾಲು ನಾಲ್ಕು ಹೆಂಚುಹೊಡಿ ಹೊಡಿ...ಆದೆ....



ಈ ಕುರೆಗ ಲಾಂಬು ಕಟ್ಟಿ ತೋಟಕ್ಕೆ ಬಾಕನ ಏನು ಬೊಬ್ಬೆ ರಾಮ ರಾಮ... ಎಷ್ಟು ಬೆರ್ಸಿರು ಹೋದುಲೆ.... ಬೊಬ್ಬೆ ಹೊಡ್ದು ... ಗರ್ನಲು ಹೊಡ್ಸಿ.... ಕನ್ನಡಿ ಹಿಡ್ದು.... ಕಡೆಗೆ ಕುರೆನ ಗೂಡು ತಂದಿರುಸಿ.... ನಮ್ಮಂದ ಉಪಾಯಲಿ ಪಿ.ಹೆಚ್.ಡಿ ಮಾಡ್ದ ಕುರೆಗ ಹೋದೇಲೆ...... "ಉಮ್ಮ ಸುಟ್ಟು ಹೋಗಲಿತೇಳಿ" ದೊಣ್ಣೆ ಬಿಸಾಡಿ.... ಹಿಡಿ ಹಿಡಿಯೋ ಹಿಡಿಯೋತೇಳಿ ತೋಟಲಿ ಪೂರಾ ಬೊಬ್ಬೆ ಹಾಕಂಡ್ ಹೋದರೆ... ದಡಬೊಡ ಬೊಂಡಗಳ ಕೀಲೆನೆ ಎಳ್ದು ಹಾಕಿರೆ ನೋಡಿಕಂಡು ಸುಮ್ಮನೆ ಕುದ್ರಿಕಾದೆನಾ....ಹೇಳಿ...

ಒಮ್ಮೆ ಏನಾತು ತೇಳ್ರೆ

ನಾ ರಜೇಲಿ ಮನೆಗೆ ಬಂದಿದ್ದೆ... ಅಮ್ಮ ಯಾಗೋಳು ಕುರೆಗ ಬಾಕನ ಹಿಡಿ ಗುಟ್ಟಿ ಬೆರ್ಸುತ್ತಿದ್ದ... ಅಮ್ಮ ಆ ದಿನ ಅವ್ವನ ಮನೆಗೆ ಹೋಗಿದ್ದ. ನಾ ತಮ್ಮ ಮನೆಲಿರ್ಕನ ಕುರೆಗ ಬಾತ್.. ತಮ್ಮ ಟಿ.ವಿ ಇಸಿ ಕುದ್ದರೆ ಕುರೆ

ಅಲಾ ಆನೆ ಬಂದರೂ ಎದ್ರಿಕಿಲೇ..... ನಾ ಹಿಡಿ ಹಿಡಿಯೋ ತೇಳ್ದೆ.... ಮತ್ತೆ ಬೊಚ್ಚಿ ಪಾರೆ ಮೇಲೆ ಸುಮ್ಮನೆ ಕುದ್ದು ಕುರೆಗಳ ಚಲನವಲನ ಗಮನಿಸಿದ್ದೆ..... ದೊಡ್ಡ ಕುರೆಗ ಸಣ್ಣ ಕುರೆಗ, ಮೊರಿಗ ಬಾರಿ ಲಾಯ್ಕ ಕಂಡತ್ತು.... ನಂಗೆ ಮೊಬೈಲ್ ತೆಕ್ಕೊಂಡು ವಿಡಿಯೋ ಮಾಡಿಕಂಡು ಪೊಟೋ ತೆಕಂಡು ಕುದ್ದೆ..... ಸ್ವಲ್ಪ ಕುರೆಗ ಆಚೆ ತೋಟಕ್ಕೆ ಒಡ್ತು..... ನಾ ಚಿಕಪ್ಪಂಗೆ ಕರೆದ್ ಹೇಳ್ದೆ ಚಿಕ್ಕಪ್ಪ ಕುರೆಗ ಬರ್ತೊಳಾತ.... ಅವು ಬೆಡಿ ಹಿಡ್ಕೊಂಡು ತೋಟ ತುಂಬಾ ಓಡಾಡುವೆ.... ಕುರೆಗಳಿಗೆ ಗುಂಡು ಹೊಡ್ದರೆ ಕೇಸುನೂ ಆದೆ ಅಲಾ.... ಹಾಂಗೆ  ನಾ ಮನೆಗೆ ಬಂದೆ ಎರಡು ಕುರೆಗ ಜಾಲುಲಿ ಕಂಡತ್ತು. ದೊಡ್ಡ ಕುರೆ ಓಡ್ದೆ ಇಲ್ಲೆ. ನಮ್ಮ ಟಾಮಿ ಬೊಗಳ್ದೆ ಓಡ್ದೆ.... ಕ್ಯಾರೆ ಇಲ್ಲೆ ನಾಯಿಗೆ ಹೊಡ್ಯೆಕೇನು ಆಗದಲ್ಲ ತೇಳಿ ನಾ... ನಾಯಿನ ದೋಸೆ ಹಾಕಿ ಕುದ್ರಿಸಿದೆ.... ನಾಯಿನ ಬಟ್ಟಲು ತೆಕ್ಕೊಂಡು ಹೋಗಿ ಜಾಲು ಕರೆಲಿ ಇಸಿ ಒಂದು ದೋಸೆ ಹಾಕಿ ಕುದ್ದೆ..... ಕಂಮ್ಮೊಂದ ಕುರೆ ಇಳ್ದು  ದೋಸೆ ತಿಂಬಕ್ಕೆ ಬಾತು ನಾ ಮೊಬೈಲ್ ಹಿಡ್ದು ಸಾಲು ಸಾಲು ಪೋಟೋ ತೆಗ್ದೆ.....ನನ್ನ ಉದ್ದೇಶನೂ ಅದೇ ಆಗಿತ್ತು.....  ಕುರೆ ಸ್ವಲ್ಪ ಸಮಯಲಿ ಹೋತು...

ಅಮ್ಮ ಎರಡನೇ ದಿನ ಬಾತ್ಲೆ ನೆಂತ್ರ ಮನೆಂದ.... ಮದ್ಯಾಹ್ನ ಆಕನ ಒಂಟಿ ಕುರೆ ಮತ್ತೆ ಬಾತಲ್ಲ... ಯಲಾ ಇದೇನು ಬಂದದುತೇಳಿ ಬೆರ್ಸಿದೆ.... ಹೊತ್ಲೆ... ನಾ ನಿನ್ನೆ ಇಸಿದ  ನಾಯಿ ಬಟ್ಟಲು ತೆಗ್ತೆಲೆ... ಆ ಕುರೆ ಬಟ್ಟಲು ನೋಡ್ದೆ.... ನಾ ಒಳಗಿಂದ ಗಂಜಿ ತಂದು ಹಾಕಿದೆ ತಿಂದತು..... ಪೋಟೋ ತೆಗ್ದೆ....

ಮೂರನೇ ದಿನ ಅಮ್ಮ ಬಂದ... ಮದ್ಯಾಹ್ನ ಆಕನಾ.. ಕುರೆನೂ ಬಾತು ಹಾಲು ಚಾಯ ಉಳ್ದಿತ್ತು ಅದರ ಹೊಯ್ದೆ.... ಕುಡ್ದು.... ಹೋತು.... ಅಮ್ಮಂಗೆ ನಾ ಪೋಟೋ ಪೂರಾ ತೋರ್ಸಿ ನಡ್ದ ಕತೆ ಹೇಳ್ದೆ.....

ತೆಕಾ ಅಮ್ಮನ ಬೊಯಿಗಳು ದಮ್ಮಯ..... ಆ ಕುರೆಗೆ ಅಭ್ಯಾಸ ಆತ್ ಇನ್ನು ದಿನಾ ಬಾದುತೇಳ್ದ....  ಮಾರನೆ ದಿನ ನಾ  ಹಾಸ್ಟೆಲ್ ಹೋದೆ..... ಕುರೆ ದಿನಾ ಬಾಕೆ ಸುರು ಮಾಡಿತ್ತು.... ಅಮ್ಮ ಏನು ಹಾಕ್ತಿತ್ಲೆ.... ಅದು ಬಟ್ಟಲು ನೋಡಿ ಹೋಗ್ತಿತ್ತಾ ಏನೋ ಅಮ್ಮ ಒಂದಿನ ಪೋನು ಮಾಡಿ ಬೈಯ್ಯಕ್ಕೆ ಸುರು ಮಾಡಿದ...

ಅದು ಮನೆ ಒಳಗೆ ಬಂದು ತರಕಾರಿ ಸಿಕ್ಕಿದ್ದು ಪೂರಾ ಕದಿಯಕೆ ಸುರು ಮಾಡಿತ್ತು ಹಂಗಾಗಿ.... ತುಂಬಾ ಉಪ್ಪದ್ರನೂ ಮಾಡ್ತಾ ಇತ್ತು..... ಆಮೇಲೆ ಅದಕ್ಕೆ ಅಮ್ಮ ಅಡಂಗಿ ಕುದ್ದು ದೊಣ್ಣೆ ಬಿಸಾಡಿ ಬಾದು ಬುಟ್ಟಿತ್ತು.....

ಕೋರೋನಾ ರಜೆಲಿ ನಾ ಬಾಕನ ಕುರೆಗಳೆ ಇತ್ಲೆ. ಬೇಸಿಗೆ ತಿಂಗ

ಹಲಸ್ನ ಹಣ್ಣು, ಮಾಯಿನ ಕಾಯಿ ತೇಳಿ ತಿಂಬಕ್ಕೆ ಸಿಕ್ಕುತ್ತಿತ್ತೇನೋ.... ಮಳೆಗಾಲ ಸುರಾಕನ ಮತ್ತೆ ವಕ್ಕರಿಸಿದೋ..... ಮತ್ತದೆ ಕುರೆ ನನ್ನ ಪರಿಚಯ ಸಿಕ್ಕಿತೋ ಏನೋ ಮನೆ ಸುತ್ತ ಮುತ್ತ ಹಾರ್ತಿತು...

ನಮ್ಮ ಮನೆ ಹಿಂದೆ ಕೊಕ್ಕ ಮರಗ ಒಳ ಅದು ಅಷ್ಟಗಳ ಬೆಳ್ದು ಕೊಟಗೆ ಮೇಲೆನೂ ಗೆಲ್ಲು ಬಗ್ಗಿತ್ತು.... ಹೇಳಿ ಕೇಳಿ ಕೊಕ್ಕ ಮರ ತುಂಬಾ ಚವುಳಿ (ಉರಿ) ಮೂಡೆಗ ಇದ್ದ.. ಮರಲಿ ಕೊಕ್ಕ ತುಂಬಾ ಹಿಡಿದ್ದದೆ ಕೂಡ... ಏಕೆ ಹೇಳ್ದೆತೇಳ್ರೆ ಚವುಳಿಗ ಇದ್ದರೆ ಕುರೆಗ, ಚಣಿಲುಗ ಮರಲಿ ಕುದ್ರುಲ್ಲೆ... ನಾ ಮನೆ ಹಿಂದೆ ನೀರಡಿಗೆ ಕಿಚ್ಚಿ ಹಾಕೋಮಾತ ಹೋಕನ ನೆಲಲಿ ಪೂರಾ ಚವುಳಿ ಮೂಡೆಗ ಅತ್ತಿತ್ತ ಹೋಕೆ ಆಗದೆ ಏನೋ ಕಚ್ಚುತ್ತಿದ್ದ ನಾ ಭರತನಾಟ್ಯ ಮಾಡಿಕಂಡು ಕಿಚ್ಚಿ ಹಾಕಮತೇಳ್ರೆ ಉರಿ ಮೂಡೆ ಇರುವ ಗೆಲ್ಲು ಮುರ್ದು ಬೀತ್... ಮೇಲೆ ನೋಡ್ಕನ ಒಂದು ಕುರೆ ತೆಗ್ದು ಮಾಡ್ ಮೇಲೆ ಹಾರ್ತು..... ನೆಲ ಪೂರಾ ಚವುಳಿ ತುಂಬಿ ಅತ್ತಿತ್ತ ಹೊಕೆ ಆದುಲೇ ಕುರೆ ಬೇರೆ... ಓಡ್ದು ಇಲ್ಲೆ ನಂಗೆ ಸಿಟ್ಟ್ ಬಾತ್ ಕೈ ಕಾಲ್ ಪುರುಂಚಿಕಂಡು ಕುರೆ ಬೆರ್ಸಿದೆ.... ಮತ್ತೆ ನೀರಡಿ ಹಕ್ಕಲೆ ಬಾಕನ ರಾಶಿ ಚವುಳಿಗ ಮೂಡೆ ಉದುರಿ ಮೊಟ್ಟೆಗ ನೆಲ ತುಂಬಾ ಹರಂಡಿತ್ತ್..... ಪಾಪ ಚವುಳಿಗ ಕಟ್ಟಿದ ಮೂಡೆನ ಕುರೆ ಉದುರ್ಸಿತು.....ಮೊಟ್ಟೆಗ ಪೂರಾ ಪೊಡಿಯಾಗಿ ಗಂಜಿ ಹರಂಡಿದಾಂಗಿತ್ತು.... ಚವುಳಿಗ ಬೇಗ ಹೊದವೇನಾ ಪಾಪ ಕೋಪಲಿ ಕಚ್ಚಿದಾಂಗೆ ಕಾಲು ಪೂರಾ ಉರಿಯಕೆ ಸುರಾತು...ನೀರಡಿಗೆ ಕಿಚ್ಚಿ ಹಾಕಿಕೂ ಬುಟ್ಟತ್ತೆ.... ಮ್ಯಾಪೂ ಹಿಡ್ದು ಪೂರಾ ಗುಡ್ಸಿ ಅತ್ತ ಹಾಕಿದೆ ಆಕನ ಜೋರು ಜಡಿ ಮಳೆ ಬಾತ್ ನೀರ್‌ಲಿ ಚವುಳಿಗಳು ಅದರ ಮೊಟ್ಟೆಗಳೂ ತೋಡ್ ನೀರಲ್ಲಿ ತೇಲಿ ಹೋತು ಪಾಪ.... ಚವುಳಿಗ ಕಷ್ಟ ಪಟ್ಟ್ ಗೂಡು ಕಟ್ಟಿ ಮೊಟ್ಟೆ ಇಸಿ ಮರಲಿ ಯಾರ ಉಪ್ಪದ್ರ ಇಲ್ಲದೆ ಬದುಕಿಕೊಂಡಿತ್ತ್..... ಈ ದೊಡ್ಡಕುರೆ ಮರಂದ ಮರಕ್ಕೆ ಹಾರ್ಕನ ಮೂಡೆ ಉದುರಿ ಹೋತ್ ಚವುಳಿ ಸಂಸಾರ ನೀರು ಪಾಲಾತು..... ಇನ್ನು ಕುರೆಗಳ ಒಳ್ಳದು ಮಾಡಿಕಂಬಕ್ಕೆ ಬೊತ್ತು.... ಕುರೆ ಬುದ್ದಿಲಿ... ಬರಿ ಉಪ್ಪದ್ರ ಮಾಡ್ದೆ.... ತೇಳಿ ಅಡಿಕೆ ಚೆಪ್ಪು ಒಲೆಗೆ ಹಾಕಿ ಓಟೆಲಿ ದಮ್ ಕಟ್ಟಿ ಉರ್ಗಿದೆ.....

ನೀತಿ : ಬೆಕ್ಕಿಗೆ ಆಟ ಇಲಿಗೆ ಪ್ರಾಣ ಸಂಕಟ ಹೇಳ್ದಾಂಗೆ.. ನಾವು ನೆಮ್ಮದಿಲಿ ಇರ್‌ಕನ ಯಾರೋ ನಡುಲಿ ಬಂದು ಉಪ್ಪದ್ರ ಕೊಟ್ಟವೇ... ನಾವು ಸೋತು ಬಿದ್ದಕನಾ ಎಲ್ಲಾ ದಾಟಿಕೊಂಡು ಹೊದವೇ ಹೊರತು ಉಪಕಾರ ಮಾಡ್ದುಲೆ..... ಮೂರನೇಯವ ಸಾಂತ್ವನ ಹೇಳಿ ದೂರ ಹೋದೆ ಅಷ್ಟೇ....

✍ ಶರಣ್ಯ ಕೋಲ್ಚಾರ್

ಪುಸ್ತಕ ವಿಮರ್ಶೆ

# ಅರೆಬಾಸೆಲಿ ಪ್ರಕಟ ಆದ ಪೊದ್ಯ ಪುಸ್ತಕಗಳ ಅವಲೋಕನ

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಮೇ 2012ರ್ಲಿ ರಚನೆ ಆದ ಮೇಲೆ ಕತೆ ಪುಸ್ತಕ, ಪೊದ್ಯ ಪುಸ್ತಕ, ಕಾದಂಬರಿ, ನಾಟಕ, ನೆನ್ಪುನ ಪುಸ್ತಕಗ, ವೈಚಾರಿಕ ಲೇಖನಗ, ಅನುಭವ ಕತೆಗ, ಆತ್ಮಚರಿತ್ರೆಗ, ಸಂಸ್ಕೃತಿಗೆ ಸಂಬಂಧಿಸಿದ ಪುಸ್ತಕಗ, ಸಂಶೋಧನಾ ಗ್ರಂಥಗ, ಮಹಾ ಪ್ರಬಂಧಗ ಹಿಂಗೆ ಸಾಹಿತ್ಯದ ಬೇರೆ ಬೇರೆ ಪ್ರಕಾರಗ ಅರೆಬಾಸೆಲಿ ಹೆಚ್ಚ್ ಹೆಚ್ಚ್ ಪ್ರಕಟ ಆಕೆ ಸುರು ಆದ್ದ್ ಜೆನ ಅರೆಬಾಸೆನ ತಿರ್‌ಗಿ ನೋಡುವಂಗೆ ಮಾಡಿಟು. ಇತ್ತೀಚೆಗೆ ನಮ್ಮ ಯುವ ಪೀಳಿಗೆನ ಗೂಡೆಗ ಹೈದಂಗಳಿಗೆ ಅರೆ ಬಾಸೆ ಪೊದ್ಯಗಳ ಬಗ್ಗೆ ಆಸಕ್ತಿ ಮೂಡ್ತಾ ಇರ್ದು ಕಂಡ್ ಬಂದದೆ. ಮೊನ್ನೆ ಮೊನ್ನೆ ಡಾ. ಕುಶ್ವಂತ್ ಕೋಳಿಬೈಲು ಇವು ಪೇಸ್ಬುಕ್ ಜಾಲತಾಣಲಿ ಸುರು ಮಾಡ್ದ 'ಪದ್ಯದಂಗಡಿ' ಅರೆಬಾಸೆಲಿ ಪದ್ಯಗಳ ಬರೆವುಕೆ ಮತ್ತೆ ಹಾಡವುಕೆ ಒಳ್ಳೆ ಅವಕಾಶ ಮಾಡಿಕೊಟ್ಟುಟು. ಅರೆ ಬಾಸೆಲಿ ಪೊದ್ಯ ಬರೆಕೆ, ಓದಿಕೆ ಮತ್ತೆ ಹಾಡಿಕೆ ತುಂಬಾ ಜೆನಕ್ಕೆ ಮೊರ್ಲ್ಲು ಉಟ್ಟು. ಆದರೆ ಅರೆಬಾಸೆ ಸಾಹಿತ್ಯ ಓದಗರಿಗೆ ಅರೆಬಾಸೆ ಸಾಹಿತ್ಯಲಿ ಪ್ರಕಟ ಆದ ತುಂಬಾ ಪುಸ್ತಕಗಳ ಬಗ್ಗೆ ಸಮಗ್ರ ಮಾಹಿತಿ ಇಲ್ಲೆ. ನನ್ನ ಈ ಲೇಖನದ ಮುಖ್ಯ ಉದ್ದೇಶ ಇಷ್ಟರ ವರೆಗೆ ಅರೆಬಾಸೆಲಿ ಪ್ರಕಟ ಅದ ಪೊದ್ಯ ಪುಸ್ತಕಗಳ ನಮ್ಮ ಓದ್‌ಗ್‌ರಿಗೆ ಪರಿಚಯ ಮಾಡಿ ಕೊಡ್ದು. ಇಷ್ಟರವರೆಗೆ ಅಂದರೆ ಮಾರ್ಚ್ 2020ರ ವರೆಗೆ ಅರೆಬಾಸೆಲಿ ಒಟ್ಟು ಹನ್ನೆರ್ಡ್ ಪೊದ್ಯ ಪುಸ್ತಕಗ ಬುಡುಗಡೆ ಆಗೊಳೊ. ಇದಲ್ಲದೆ ಇನ್ನ್ ಎಷ್ಟೋ ಜೆನ ಅರೆಬಾಸೆಲಿ ಪೊದ್ಯಗಳ ಬರ್ದ್ದ ಬೇರೆ ಬೇರೆ ಪತ್ರಿಕೆಗಳ್‌ಲಿ ಪ್ರಕಟಮಾಡೆಳೊ. ಇಲ್ಲಿ ಪುಸ್ತಕರೂಪಲಿ ಪ್ರಕಟ ಆದ ಪೊದ್ಯಗಳ ಬಗ್ಗೆ ಮಾತ್ರ ಅವಲೋಕನ ಮಾಡೆಳೆ.

ಅರೆಬಾಸೆಲಿ ಪ್ರಕಟ ಆದ ಪೊದ್ಯ ಪುಸ್ತಕ (ಕವನ ಸಂಕಲನ) ಗಳ ವಿವರ ಈ ರೀತಿ ಉಟ್ಟು:

1. ತೊಂಬರ, ಯಶವಂತ ಕುಡಕಲ್ಲು ಬಂಟಮಲೆ ಪ್ರಕಾಶನ, ಗುತ್ತಿಗಾರು, 2003.
2. ಸಡಗರ, ಹಿಮಕರ/ಕುದ್ಪಾಜೆ. ಬಂಟಮಲೆ ಪ್ರಕಾಶನ, ಗುತ್ತಿಗಾರು, 2003.
3. ಸಂತೃಪ್ತಿ, ಹೊದ್ದೆಟ್ಟಿ ಭವಾನಿಶಂಕರ ಬಂಟಮಲೆ ಪ್ರಕಾಶನ, ಗುತ್ತಿಗಾರು, 2003–04.
3. ಅ. ಮೋಟಿಗೂಡೆನ ಮೊದುವೆ, ಹೊದ್ದಟಿ ಭವಾನಿಶಂಕರ ಬಂಟಮಲೆ ಪ್ರಕಾಶನ, ಗುತ್ತಿಗಾರು, 2003.
4. ಜೇನೆರಿ, ಯಶವಂತ ಕುಡಕಲ್ಲು, ಬಂಟಮಲೆ ಪ್ರಕಾಶನ, ಗುತ್ತಿಗಾರು 2007.
5. ನೀಲಿದಾರಿ, ಕರುಣಾಕರ ನಿಡಿಂಜಿ, ಶ್ರೀ ದುರ್ಗಾ ಪ್ರಕಾಶನ, ಪುತ್ತೂರು, 2014.

6. ನಮ್ಮೂರ ಹಾಡು ಮತ್ತು ಭಕ್ತಿ ಗೀತೆಗಳು, ಕುಯಿಂತೋಡು ದಾಮೋದರ, ಅಮ್ಮ ಪ್ರಕಾಶನ, ಕಟಪಾಡಿ, 2015.
7. ಬೇರ್‌ಲಿ ಚಿಗ್‌ರ್, ಬೈತಡ್ಕ ಜಾನಕಿ ಬೆಳ್ಯಪ್ಪ, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, 2015.
8. ಸರ್ಮಾಲೆ, ಎಂ ಜಿ ಕಾವೇರಮ್ಮ, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, 2015.
9. ತೋರಣ, ಬಾರಿಯಂಡ ಆರ್ ಜೋಯಪ್ಪ, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, 2016.
10. ಅನುಭವ ಧಾರೆ, ಹೊದ್ದೇಟಿ ಭವಾನಿಶಂಕರ, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, 2017.
11. ತಿಂಗೊಳ್ ಬೆಳ್‌ಕ್-ಅರೆಬಾಸೆ ಪೊದ್ಯಗ, ಯೋಗೀಶ ಹೊಸೊಳಿಕೆ, ಕಿರಣ ರಂಗ ಅಧ್ಯಯನ ಸಂಸ್ಥೆ, ಗುತ್ತಿಗಾರು, 2017.
12. ನೆಗೆಬೇಕು ಕೇದಗೆ ಗೊನೆ ಹಾಂಗೆ, ಕರುಣಾಕರ ನಿಡಿಂಜಿ, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, 2019.

(ವಿಶೇಷ ಮನವಿ: ಮೇಲೆನ ಪಟ್ಟಿಲಿ ಯಾರ್ದಾದರು ಕವನ ಸಂಕಲನ ಪುಸ್ತಕದ ಹೆಸ್ರ್ ಬುಟ್ಟು ಹೋದರೆ ದಯಮಾಡಿ ತಿಳ್ಸಿ)

ಅರೆಬಾಸೆಲಿ ಪ್ರಕಟ ಆದ ಪದ್ಯ ಪುಸ್ತಕಗಳ ಸಣ್ಣ ಪರಿಚಯ

## 1.ತೊಂಬರ

ಯಶವಂತ ಕುಡಕಲ್ಲು ಇವು ಅರೆಬಾಸೆ ಸಾಹಿತ್ಯಕ್ಕೆ ನೀಡ್ದ ದೊಡ್ಡ ಕೊಡುಗೆ. 'ತೊಂಬರ' ಎಂಬ ಪೊದ್ಯ ಪುಸ್ತಕ. ಇದ್‌ಕ್ಕೆ ಗೌಡ ಕನ್ನಡದ ಸುರೂನ ಪೊದ್ಯ ಪುಸ್ತಕ ಎಂಬ ಖ್ಯಾತಿನೂ ಉಟ್ಟು. ಬಂಟಮಲೆ ಪ್ರಕಾಶನ, ಗುತ್ತಿಗಾರು, ಸುಳ್ಯ ತಾಲೂಕು, ದ.ಕ ಇವು 2003ರ್ಲಿ ಇದರ ಪ್ರಕಟಣೆ ಮಾಡ್ದೊ. ಒಟ್ಟು 60+10=70 ಪುಟ ಇರ್ವ ಈ ಪೊದ್ಯ ಪುಸ್ತಕಲಿ 33 ಪೊದ್ಯಗ ಒಳ. ಅದ್ಕೆ ಸುರೂನ್ ಮಾತ್ (ಮುನ್ನುಡಿ) ಬರ್ದೊವು ಎ.ಕೆ. ಹಿಮಕರ. ಅರೆಬಾಸೆಲಿ ಬರ್ದ ಒಂದು ಪೊದ್ಯ ಪುಸ್ತಕ ಎರ್ಡ್‌ನೆ ಮುದ್ರಣ ಕಂಡುಟು ತೇಳಿರೆ ಅದ್ ಎಷ್ಟು ಒಳ್ಳೆದಿರ್ದು ತೇಳಿ ಬೇರೆ ಮಾತ್‌ಲಿ ಹೇಳ್ವ ಅಗತ್ಯ ಇಲ್ಲೆ. ಎರ್ಡನೇ ಮುದ್ರಣಕ್ಕೆ ಸುರೂನ ಮಾತ್ ಬರ್ದೊವು ಅರೆಬಾಸೆನ ಹಿರಿಯ ವಿದ್ವಾಂಸ ಪ್ರೊ.ಕೋಡಿ ಕುಶಾಲಪ್ಪ ಗೌಡ್ರು.

ಇಲ್ಲಿರುವ ಎಲ್ಲಾ ಪದ್ಯಗ ಒಂದು ಕತೆ ರೀತಿಲೇ ಇದ್ದ್, ಅದರ್ಲಿ ಒಂದು ಮನೆ, ಊರ್‌ಲಿ ನಡೆವ ಸಂಗತಿಗಳ ಪ್ರತಿಬಿಂಬ ಉಟ್ಟು, ಹಾಸ್ಯವೂ ಉಟ್ಟು, ನೀತಿನೂ ಉಟ್ಟು ಜೊತೆಗೆ ಚರಿತ್ರೆನೂ ಉಟ್ಟು. ಇವರ ಪೊದ್ಯಗಳ್‌ಲಿ ಸ್ಪಷ್ಟ, ಸರಳ, ಸುಲಭಲಿ ಹೇಳುವ ತಂತ್ರಗಾರಿಕೆ ಕಂಡದೆ. ಹಿಮಕರ ಅವರ ಮಾತ್‌ಲಿ ಹೇಳ್ದಾದರೆ "ಮಾನವೀಯತೆ ಎದ್ದ್ ಕಂಡದೆ, ಊರು ಬಗ್ಗೆ, ಜನರ ಬಗ್ಗೆ, ಬಾಸೆ ಬಗ್ಗೆ ಬಾರಿ ಕೊಂಡಾಟ ಇರ್ದು ಕಂಡದೆ. ಹೆಸರ್‌ನ ಆಯ್ಕೆ 'ಕುಜಿಲ್

ಸೇಸ', ಬಾರ್ಬರ್ ಕೇಪಣ್ಣ' ಇವೆಲ್ಲ ಜನಸಾಮಾನ್ಯರ ವಸ್ತ್, ಬರೇ ಗೌಡಂಗಳದ್ದಲ್ಲ. ಅಜ್ಜಿ ಸಾಂಕಿದ ಪುಳ್ಳಿಲಿ ಕ್ರಾಂತಿಕಾರಿ ನಿಲುವು ಉಟ್ಟು, ಗೌಡ್ರ ಸಂಸ್ಕೃತಿ ಎದ್ದ್ ಕಾಂಬೊದರ 'ಆಟಿ ಅಮಾವಾಸೆಲಿ ಅಂದ್' ಪದ್ಯಲಿ ಉಟ್ಟು. ಕುಜಿಲ್ ಸೇಸ ಗೌಡ್ರ ಸಾಹಸದ ಪ್ರತೀಕ, ಅಂವ ಹಳ್ಳಿನ ಸರ್ವಜ್ಞ.

'ಗೂಡೆ' ಪೊದ್ಯದ ಮೂಲಕ ಯಶವಂತರ್ ಒಂದು ಶೃಂಗಾರ ಕಾವ್ಯನನೇ ಕೊಟ್ಟೊಳೊ. ಹಿಂಗೆ ಪ್ರತಿ ಪೊದ್ಯಲೂ ಒಂದೊಂದು ವಿಶೇಷ ಗುಣ ಉಟ್ಟು. ಸಮಾಜದ ಸಮಸ್ಯೆಗಳೂ ಪದ್ಯಲಿ ಉಟ್ಟು. 'ಇನ್ನು ಮೊದುವೆ ಆತ್ಲೆ ಅಣ್ಣ' ಇದ್ಕೆ ಒಂದು ಉದಾರ್ಣೆ. 'ದೊಡ್ಡಮನೆ ಚೊಂಪನ ಸಾವು' ಊರ್‌ನ ಒಬ್ಬ ಹಿರಿಯ ವ್ಯಕ್ತಿ ಸಮಾಜಕ್ಕೆ ನೀಡ್ದ ಕೊಡುಗೆ, ಜೊತೆಗೆ ಮನೆಲಿ ಸಾವು ಆಕನ ಇರುವ ಮನಮಿಡಿವ ಚಿತ್ರಣವೂ ಉಟ್ಟು. ಸತ್ತರೆ ಸುಡುವ ವಿಧಿವಿಧಾನಗಳ ಬಗ್ಗೆ ತಿಳುವಳಿಕೆ ಸಹ ಉಟ್ಟು. ಹಿಂಗೆ ಬಡತನ, ಸಂಪ್ರದಾಯ, ಹಾಸ್ಯ, ಶೃಂಗಾರ, ಆಚರಣೆ, ಎಲ್ಲವೂ ಇರುವ ಸಮರಸ ಹೊಂದಿರುವ ಪೊದ್ಯಪುಸ್ತಕ 'ತೊಂಬರ'

## 2. ಸಡಗರ

ಅರೆಬಾಸೆನ ಮೊದಲ ಕವಿಗೋಷ್ಠಿ 24.9.1995ರ್ಲಿ ಗುತ್ತಿಗಾರ್ಲಿ ಆಗಿತ್ತ್. ಅದರ್ಲಿ ಓದಿದ ಕವನಗಳ ಹೆರ್ಕಿ 'ಸಡಗರ'ಲಿ ಪ್ರಕಟ ಮಾಡೆಳೊ. ಬಂಟಮಲೆ ಪ್ರಕಾಶನಲಿ ಪ್ರಕಟ ಆದ ಈ ಪೊದ್ಯ ಪುಸ್ತಕದ ಸಂಪಾದಕರ್ ಶ್ರೀ ಎ.ಕೆ. ಹಿಮಕರ ಮತ್ತೆ ಶ್ರೀ ಸಂಜೀವ ಕುದ್ಪಾಜೆ. ಒಟ್ಟು 45+15=60 ಪುಟ ಇರುವ ಈ ಪುಸ್ತಕಲಿ ಪೊದ್ಯ, ಚುಟುಕು ಸೇರಿ ಒಟ್ಟು 52 ಉಟ್ಟು. ಈ ಪುಸ್ತಕ 2003ರಲ್ಲಿ ಪ್ರಕಟ ಆವುಟು. ಇದ್ಕೆ ಸುರೂನ ಮಾತ್ ಬರ್ದೊವು ಎ.ಕೆ ಹಿಮಕರ. ಇನ್ನೊಬ್ಬ ಸಂಪಾದಕ ಶ್ರೀ ಸಂಜೀವ ಕುದ್ಪಾಜೆ ಇವು 'ಬೊಳ್ಪು ತೋರ್ಸುವವರ ಮಾತ್' ಅಂತ ಮುನ್ನುಡಿ ಬರ್ದೊಳೊ.

ಇದರ್ಲಿ ಬರ್ದ ಕವನ/ ಚುಟುಕುಗಳ ಬಗ್ಗೆ ಹಿಮಕರರ್ ಅವರ ಮುನ್ನುಡಿಲಿ ಚೆನ್ನಾಗಿ ವಿಶ್ಲೇಷಣೆ ಮಾಡೆಳೊ. ಅವರ ಶಬ್ದಲೇ ಹೇಳ್ದಾದರೆ "ಪದ್ಯ ಓದೊಕು, ಕಪ್ಪೆ, ಪ್ರಾಣಿ, ಪಕ್ಷಿ, ಊರು, ಕೇರಿ, ಸಂಗ್ತಿಗಳ ಒಳನೋಟ ಅದರ್ಲಿ ಉಟ್ಟು. ಆಧುನಿಕತೆ ಬಗ್ಗೆ ವಿಮರ್ಶೆ ಉಟ್ಟು. ಭಾಷೆ ಬಗ್ಗೆ ಹೇಳುವೆ. ಹಾಡಿಕೆನೂ ಪೊರ್ಲು ಉಟ್ಟು, ಬಾರಿ ಸಾಮರ್ಥ್ಯದ ವ್ಯಕ್ತಿ ಅವು. ತೇಜಕುಮಾರ್ ಬಡ್ಡಡ್ಕ ನಮ್ಮವರ ಚರಿತ್ರೆನ ಗುಟ್ಟುಲಿ ಹೇಳ್ವೆ, ಹೆಮ್ಮೆಲಿ ಹೇಳ್ವೆ, ಮದುವೆ ಗದ್ದೆನ ಗೌಜೀಂತ ಹೇಳ್ರೆ ನಮ್ಮವರ ಗೌಜಿ. ಅವುಕೆ ನಮ್ಮ ಚರಿತ್ರೆಲಿರುವ ವ್ಯಕ್ತಿಗಳ ಗೊತ್ತಿದ್ದ ಕಾರಣ ಹಾಂಗೆ ಬರ್ಯಕೆ ಸಾಧ್ಯಾದೆ. ಪ್ರಸನ್ನಂಗೆ ಅವರ ಅಜ್ಜನ ಬಗ್ಗೆ ಗೊತ್ತುಟ್ಟು. ಬಡ್ಡಡ್ಕ ಅಪ್ಪಯ್ಯ ಗೌಡ ಸಾಹಸಿ ಮನುಷ್ಯ. ಅವು ಒಂದು ರೀತಿಲಿ ದಂತಕತೆ. ಅವರ ಬಗ್ಗೆ ಲಾಯ್ಕ್‌ಲಿ ಬರ್ದೊಳೊ. ವಿದ್ಯಾಧರನ ಪದ್ಯಲಿ ನಮ್ಮವರ 'ನೆನ್ಪು' ಆದೆ. ಸೋತೊವು ಕಷ್ಟಕಾರರ್, ಸಾಹಸಿಗ, ಯಾರ್‍ಯಾರ್‌ದೋ ಮೋಸಕ್ಕೆ, ತಗಾದೆಗೆ ಬಲಿಯಾದವರ ಬಗ್ಗೆ ಮಾರ್ಮಿಕ ನೋಟ ಉಟ್ಟು, ಮನುಷ್ಯರ ಜೀವನ ಸಾರನ ಸಣ್ಣ ಪದ್ಯದೊಳಗೆ·ಕುಕ್ಕೆಟ್ಟಿ ಜಯಪ್ರಕಾಶ್ ಹಿಡ್ದಿಸೆಳೊ. ಗಂಡನ ಬಗ್ಗೆ ಇರುವ

ಪ್ರೀತಿ, ತವಕನ ಗಂಡ್ ಹೆಂಣ್ ಸಂಬಂಧದ ಬಗ್ಗೆ ಕುಸುಮಾ ಕುಕ್ಕೆಟ್ಟಿ ಶಕ್ತಿಶಾಲಿಯಾಗಿ ಬರ್ದೊಳೊ. ಜೂಲಿಂತೇಳುವ ನಾಯಿನ ಬಗ್ಗೆ ಸತ್ಯ ಪ್ರಕಾಶ ದೇರಪ್ಪಜ್ಜನ ಮನೆಯವು ಬರ್ದ ಪದ್ಯ ನಾಯಿನೊಟ್ಟಿಗೆ ನಿಲ್ಲುದುಲೆ. ನಮ್ಮ ಬೇನೆ, ಬೇಜಾರ್, ಬದುಕುತ್ತಿರುವ ರೀತಿನ ವಿವರ್ಸಿ ಹೇಳ್ದೆ. ಭೂಮಿ ಮಾತಾಡ್ದೊರ, 'ಯೆತೆ' ಪದ್ಯಲಿ ಬಾಬು ಮಾಸ್ಟ್ರ ಬರ್ದೊಳೊ. ಪರಿಸರ ಪ್ರೇಮ, ಪ್ರಾಣಿ ದಯೆ, ಜೀವ ಸಮತೋಲನ ಹೀಂಗೆ ಇಂದ್‌ನ ವಿಚಾರಗಳ ಕಾಳಜಿ ಕಂಡದೆ. ನಮ್ಮವರ ದುರಾಭ್ಯಾಸಗಳ ಬಗ್ಗೆ ಜಾನಪದ ಪದ್ಯದ ದಾಟಿಲಿ ಯು.ಸು.ಗೌಡ್ರು ಎಚ್ಚರಿಕೆ ಕೊಟ್ಟವೆ. ಬಡ್ಡಡ್ಕದ ವೇದಾವತಿ ಅನಂತ ಸ್ವತ ರಾಜಕಾರಣಿ ಕೂಡಾ. ಸಮಾಜಲಿ ಓಟುನ ರಾಜಕೀಯ ಮಾಡ್ದವರ ಬಗ್ಗೆ ಕಿವಿಮಾತ್ ಹೇಳಿವೆ. ಮೇಪತ ಹೈದನ ಚಿತ್ರಣ ಕಣ್ಣಿಗೆ ಕಟ್ಟುವ ಹಾಂಗೆ ಬರ್ದೊಳ. ರೇಷ್ಮಾ ಪ್ರಾಯಲಿ ಸಣ್ಣವಳಾದ್ರು ಜೀವನಾನುಭವ ದೊಡ್ಡದುಟ್ಟು. ಎರಡೂ ಪದ್ಯಗಳ್‌ಲಿ ಮನುಷ್ಯ ಮನುಷ್ಯರ ನಡುವಿನ ಸಂಬಂಧಗಳ ವಿವರಣೆ ಉಟ್ಟು. ಚೈತನ್ಯ ಸ್ವಾಮಿಗ ಭಕ್ತಿರಸ ಸಾರಗಳ ಪದ್ಯಲಿ ಕೊಟ್ಟೊಳೊ. ಅದಲ್ಲದೇ ಗೌಡ ಕವಿಗಳ ಸ್ವಾಗತಿಸುವ ಪದ್ಯ ಸಕಾಲಿಕ. ಮಲ್ಲಾರ ಲಲಿತಾಜ ಅವರ್ದ್ ವೈವಿಧ್ಯದ ವಸ್ತು ನಿರೂಪಣೆ. ಗಾಂಧಿನ ಬಗ್ಗೆ ಹೇಳ್‌ವೆ. ಹೆಣ್ಣ್‌ನ ಸಾಮರ್ಥ್ಯದ ಬಗ್ಗೆ ಆಶಾಭಾವನೆ ಉಟ್ಟು, ಸಾಮಾಜಿಕ ಸಾಂಸಾರಿಕ ಚಿತ್ರಣ ಉಟ್ಟು, ಮೂಲತಃ ಕಾದಂಬರಿಕಾರರಾದರೂ ಪದ್ಯ ಕೂಡಾ ಅವುಕೆ ಸಿದ್ದಿಸಿಟ್ಟು, ಕಮಲಾ ಬಾಲಚಂದ್ರ, ಗಣಪತಿ ಹಾಲು ಕುಡ್ದ ವಿಚಾರನ ಪದ್ಯಲಿ ಹೇಳಿವೆ. ಸಣ್ಣ ಘಟನೆಗೆ ರಂಗಾಗಿ ಹೇಳುವ ಕೌಶಲ ಬಡ್ಡಡ್ಕ ಚಂದ್ರಮತಿದ್. 'ಮುರಾರಿ', ಪ್ಯಾಶನ್", ಬಾಯ್ ಫ್ರೆಂಡ್, ನನ್ನಣ್ಣ ಹೀಂಗೆ ಚುಟುಕಾಗಿ ತಮಾಷೆಲಿ ವಿಷಯ ತಿಳ್ಸಿವೆ. ಮಾಧವ ಹರ್ಲಡ್ಕ ಇಷ್ಟ್ ಲಾಯಿಕ್ ಪದ್ಯ ಬರ್ದವೇಂತ ಬಹಳ ಮಂದಿಗೆ ಗೊತ್ತಿಲ್ಲೆ, ಬಂಟಕಾಡ್‌ಲಿ ಗಾರ್ಡ್ರ್ ಆಗಿದ್, ಹಂಪಿಲಿ ಮರ ಬೆಳ್ಸಿದ ಸೂಪಿ ಬ್ಯಾರಿನ ಮೂಲಕ ಪರಿಸರ ಪ್ರಜ್ಞೆ ಬೆಳೆಸುವ ಕವನ ಬಾರಿ ಲಾಯ್ಕುಟ್ಟು, ಮಾಧವ ಹೆಚ್ಚು ಬರ್ಯದಿದ್ದರೆ ನಾವುಗೆ ನಷ್ಟ. ದೇಶಭಕ್ತಿಗೀತೆನ ಅರೆಬಾಸೆಲಿ ಬರ್ದ ಕೀರ್ತಿ ಅಡ್ಪಂಗಾಯ ಸಾಂತಪ್ಪನವರದ್. ಪ್ರೇಮಕವನ ಬರ್ಯೋದು ಒಂದು ಪ್ರಾಯಲಿ ಸಹಜ. ಆದರೆ ಅದರ ಲಾಯ್ಕಲಿ ಬರ್ಯೊದು ಎಲ್ಲವುಕಾದುಲೆ. ಅದರ ಹದ್ ಮೀರದಾಂಗೆ ಬರೆಯುವ ಕಲೆ ಜಯರಾಮ ದೇರಪ್ಪಜ್ಜನ ಮನೆಯವುಕೆ ಸಿದ್ದಿಸಿಟು. ನಮ್ಮ ಹಿರಿಯ ಪಂಡಿತರ ಪೈಕಿ ಡಿ.ಜಿ.ನಡ್ಕ ಕೂಡ ಒಬ್ಬ. ಗೌಡರ ಚರಿತ್ರೆ ಬಗ್ಗೆ ಅವುಕ್ಕೆ ಗೊತ್ತಿದ್ದಷ್ಟ್ ಯಾರಿಗೂ ಗೊತ್ತಿಲ್ಲೆಂ ತೇಳೊಕಾದೆ. ಆದರೆ ಅವರ ಪದ್ಯಲಿ ಇಂದ್‌ನ ಸಾಮಾಜಿಕ ಕೌಟುಂಬಿಕ ಸಂಗತಿಗಳ ನವಿರಾಗಿ ಬರ್ದೊಳ. ಹಾಂಗೇನೇ ನಮ್ಮ ಯುವ ಕವಿ ಹಾಡಿಕಲ್ಲು ಜಯರಾಮ ಅವರ ಪದ್ಯಗಳಲಿ ಪ್ರಕೃತಿ ಚಿತ್ರಣ, ಮಾನವ ಸಂಬಂಧದ ವಿವರ ಸಿಕ್ಕಿದೆ. ಶೋಭಾ ದೊಡ್ಡಿಕಾನ ನಮ್ಮ ನಡುಲಿ ಇರುವ ಒಳ್ಳೆ ಕವಿ. ಒಟ್ಟ್‌ಲಿ ನೋಡಿರೆ ನಮ್ಮ ಮಹಿಳೆಯರ ಪೈಕಿ ಬಹಳ ಜನಕ್ಕೆ ಬರ್ಯಕೆ ಬಂದದೆ. ಮಾತ್ರ ಅಲ್ಲ ಒಳ್ಳೆ ಬರ್ದವೆ"

## 3. ಸಂತೃಪ್ತಿ

ಅರೆಬಾಸೆ ಪೊದ್ಯಗಳ ಜನಕ ಶ್ರೀ ಹೊದ್ದೆಟ್ಟಿ ಭವಾನಿಶಂಕರ ಇವರ ಅರೆಬಾಸೆ ಪೊದ್ಯ ಪುಸ್ತಕ 'ಸಂತೃಪ್ತಿ' 2003–2004 ರ್ಲಿ ಬಂಟಮಲೆ ಪ್ರಕಾಶನದ ಅಡಿಲಿ ಪ್ರಕಟ ಆವುಟು. ಒಟ್ಟು 100 ಪುಟ ಇರುವ ಈ ಪುಸ್ತಕಲಿ 50 ಪೊದ್ಯಗ ಮತ್ತು ಅಲ್ಲಲ್ಲಿ ಓದೊವ್‌ಕೆ ಉದಾಸೀನ ಆಕೆ ಬೊತ್ತು ತೇಳಿ ಚುಟುಕುಗಳನೂ ಸೇರ್ಸೆಳೊ. ಹೊದ್ದೆಟ್ಟಿಯವು ತುಳು ಪದ್ಯಗಳ ಸಹ ಬರ್ದ್ದೊಳೊ. ಇದರ್ಲಿ ಬರ್ದ ಕೆಲವು ಪೊದ್ಯಗ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡಸಮಾಜ ಬೆಂಗಳೂರು. ಇವು 1968 ಮತ್ತು 1970ರ್ಲಿ ಪ್ರಕಟಿಸಿದ ಗೌಡ ಸಮಾಜದ ಸಂಸ್ಕೃತಿ ಪುಸ್ತಕಗಳಲಿ ಅಚ್ಚಾವುಟು. ಆ ಕಾರಣಕ್ಕೆ ಹೊದ್ದೆಟ್ಟಿವು ಅರೆಬಾಸೆನ ಸುರೂನ 3 ಜನ ಕವಿಗಳ್‌ಲಿ, ಒಬ್ಬ, ಅಂತ ಹೆಸ್ರ್ ಮಾಡೆಳೊ. ಇದರ್ಲಿ ಪ್ರಕಟ ಆದ ದ್ಯಾಂಪನ ಗದ್ದೆಗೋರಿ, ಒಗ್ಗಟ್ ನಮ್ಮಲ್ಲಿ ಎಲ್ಲುಟ್ಟು, ಅಜ್ಜಿ ಸಾಂಕಿದ ಮಂಞ ಆಕಿಲೆ, ಜೋಮನ ಕೋಳಿ ಕಟ್ಟ, ಮೋಟಿಗೂಡೆನ ಮೊದುವೆ ಇವೆಲ್ಲಾ ಸಮಾಜ ಸಂಸ್ಕೃತಿ ಪುಸ್ತಕ 1968 ಮತ್ತು 1970ರ್ಲಿ ಪ್ರಕಟ ಆಗೊಳೊ. ಶ್ರೀ ಪೂಜಾರೀರ ಮೊಣ್ಣಪ್ಪ ಇವು ಸಂತೃಪ್ತಿ ಪುಸ್ತಕಕ್ಕೆ ಒಳ್ಳೆ ಮುನ್ನುಡಿ ಬರ್ದಳೊ. ಬಂಟಮಲೆ ಪ್ರಕಾಶನದ ಯಜಮಾನ ಶ್ರೀ ಎ ಕೆ ಹಿಮಕರವು ಇವುಕೆ 'ಆಧುನಿಕ ಕಾವ್ಯ ಪರಂಪರೆನ ಅಪ್ಪ.' ಎನ್ನುವ ಬಿರುದು ಕೊಟ್ಟೊಳೊ. ಗೌಡ್ರಿಗೆ ಅರೆಬಾಸೆಲಿ ಪೊದ್ಯ ಬರೆಕೆ ಆದೆಂತ ತೋರ್ಸಿಕೊಟ್ಟೊವು ಹೊದ್ದೆಟ್ಟಿ ಭವಾನಿಶಂಕರ ಗೌಡ್ರು. ಗೌಡಕನ್ನಡಕ್ಕೆ ರಾಜಮರ್ಯಾದೆ ಸಿಕ್ಕಿಕೆ ಇವ್ ಒಬ್ಬ ಕಾರಣಕರ್ತರ್. ಅವರ ಪದ್ಯಗಳ್‌ಲಿ ಸತ್ಯ ಉಟ್ಟು, ಸತ್ವವೂ ಉಟ್ಟು. ಬಾಸೆನ ದುಡಿಸಿಕಂಬ ಸಿರಿವಂತಿಗೆ ಅವುಕೆ ಸಿದ್ದಿಸಿಟು. ಅವರ ಕಲ್ಪನೆ, ವರ್ಣನೆ, ಶಬ್ದ ಜೋಡಣೆ ಸಂದರ್ಭಗಳ ಕಟ್ಟುವ ರೀತಿಗ ಅರೆಬಾಸೆ ಸಾಹಿತ್ಯಲೇ ಅಪರೂಪ. ಅವರ ಪದ್ಯಗಳ ವಿಷಯಗ, ಪ್ರಾಸಗಳ ಬಳಸಿದ ರೀತಿ, ಹಾಡಿಕೂ ಕುಸಿ, ಓದಿಕೂ ಕುಸಿ ಹಾಂಗೇ ಹಾಡುವ ಹಾಡ್‌ಗಳ ಕೇಳಿಕೂ ಕುಸಿ ಆದೆ. ಅವು ಹೇಳುವ ಪ್ರಕಾರ ಅವು 1967ರಲ್ಲಿ ಬೆಂಗಳೂರ್ಲಿ ಪ್ರಕಟ ಆದ ಕೊಡಗ್ ಮತ್ತು ದಕ್ಷಿಣ ಕನ್ನಡದ ಗೌಡ ಸಮಾಜದ ಬಿಡುಗಡೆ ಮಾಡ್ದ ಪುಸ್ತಕಲಿ ಬರೆ 6 ಪದ್ಯಗಳ ಬರ್ದಿದ್ದೊ. 1970ರಲ್ಲಿ ಬಿಡುಗಡೆ ಆದ ಪುಸ್ತಕಲಿ 12 ಪದ್ಯಗಳ ಬರ್ದಿದ್ದೊ. ಅದರ್ಲಿದ್ದ ಪದ್ಯಗಳ ಮತ್ತೊಮ್ಮೆ ಸಂತೃಪ್ತಿಲಿ ಪ್ರಕಟ ಮಾಡಿ ಹೆಚ್ಚಿನ ಜನಕ್ಕೆ ಅರೆಬಾಸೆ ಸಾಹಿತ್ಯ ಸಿಕ್ಕುವಂಗೆ ಮಾಡಳೊ. ಲಾಯರ್ ಪೂಜರೀರ ಮೊಣ್ಣಪ್ಪ ಇವರ ಪ್ರೋತ್ಸಾಹನ ಮನದಾಳಂದ ವ್ಯಕ್ತ ಮಾಡಿ ಉಪಕಾರ ಸ್ಮರಣೆ ಮಾಡಿಕಂಡೊಳೊ. ಇವರ ಪೊದ್ಯಗಳಲಿ ಭಕ್ತಿಗೀತೆ ಉಟ್ಟು, ದೇವರ ಪ್ರಾರ್ಥನೆ ಉಟ್ಟು, ಹಿರಿಯರಿಗೆ ಗೌರವ ಸಲ್ಲಿಸುವ ಪದ್ಯಗಳೂ ಒಳೊ. 'ಶ್ರೀ ಕೃಷ್ಣನೆ' 'ಗುರುದೇವುಗೆ' ಇದ್ಕೆ ಉದಾಹರಣೆ. ಶ್ರೀ ಕೃಷ್ಣನೆ ಎಂಬ ದೇವರ ಸ್ತೋತ್ರ ದ ವಿಸೇಸ ಏನ್‌ತೇಳ್ರೆ ಆ ಇಡೀ ಸ್ತೋತ್ರದ 10 ಗೆರೆಗಳ್‌ಲಿ ಸುರೂನ ಅಕ್ಷರಗಳ ಜೋಡ್ಸಿರೆ, ಭವಾನಿಶಂಕರನ ರಚನೆ, ಎಂಬ ಶಬ್ದ ಉತ್ಪತ್ತಿ ಆದೆ. ಇದರ್ಲಿ ಭವಾನಿಶಂಕರ್‌ರಿಗೆ ಪದ್ಯ ಬರೆವ ಕಲೆ ಸಿದ್ದಿಸಿಟು ಅಂತ ಗೊತ್ತಾದೆ.

ಈ ಪುಸ್ತಕದ ಒಂದು ಸಣ್ಣ ಲೋಪ ಏನು ಕೇಳ್ರೆ ಪರಿವಿಡಿ ಇಲ್ಲೆ. ಮೋಟಿ ಗೂಡೆನ ಮೊದುವೆ ಪದ್ಯದ ಬಗ್ಗೆ ಎಷ್ಟೊ ಹೇಳಿರೂ ಕಡಿಮೆನೇ ಆದು. ಅದರ್ಲಿ ಒಂದು ವಿಡಂಬನೆ ಮತ್ತು ನೈಜತೆ ಉಟ್ಟು. ಹುಟ್ಟಿದ ಹೆಣ್ಣು ಮಗುವಿಗೆ ಹಿತನುಡಿಗಳು ಪದ್ಯಲಿ ಹೆಣ್ಣಿನ ಬಗ್ಗೆ ಅತೀ ಕಳಕಳಿ ಮತ್ತು ಗೌರವ ಇರ್‍ದು ಕಂಡ್‌ಬಂದದೆ. ಅಜ್ಜಿ ಸಾಂಕಿದ ಮಜ ಆಕಿಲೆ. ಪದ್ಯಲಿ ಮಕ್ಕಳ ಬುದ್ಧಿ ಹಾಳಾಗದಂಗೆ ಇರೋಕಾದರೆ ಜಾಸ್ತಿ ಕೊಂಡಾಟ ಮಾಡಿಕೆ ಬೊತ್ತು ಅಂತ ಅನುಭವದ ಮಾತ್‌ಗಳ ಹೇಳೆಳೊ. 'ಜೋಗುಳ ಹಾಡ್ ಸಾ ಅರೆಬಾಸೆ ಸಬ್ದಕ್ಕೆ ಬಾರೀ ಲಾಯಿಕ್ ಉಟ್ಟು. 'ನಮ್ಮೂರ ಹಳ್ಳಿ, ವಿದ್ಯಾಭ್ಯಾಸ ಪದ್ಯಗಳ ವಿಷಯಗ ನಮ್ಮ ಬೊದ್ಕ್‌ಗೆ ಹತ್ತಿರ ಆಗಿ ಉಟ್ಟು. ಅತ್ತೆ ಸೊಸೆ ಪದ್ಯ ಕುಟುಂಬದ ಒಳಗಿನ ವಿಷಯಗಳ ಸತ್ಯನ ತಿಳ್ಸಿದೆ. ಗೌಡರ ಮೊದುವೆ ಪದ್ಯಲಿ ಇಡೀ ಮೊದುವೆ ಸಂಪ್ರದಾಯನ ಪದ್ಯರೂಪಲಿ ದಾಖಲ್ ಮಾಡೆಳೊ. ಇದೊಂದು ಕಾವ್ಯ ರೀತಿಲಿ ಉಟ್ಟು. 'ಕುಡ್ಕ ಗಂಡ' ಪದ್ಯಲಿ ಬುದ್ಧಿವಾದದ ಆಶಯ ಉಟ್ಟು. ದ್ಯಾಪುನ ಗದ್ದೆಗೋರಿ ಒಂದು ಹಾಸ್ಯಮಯ ಸನ್ನಿವೇಶದ ವರ್ಣನೆ. 'ನಾವೆಲ್ಲವೂ ಒಂದ' ಪದ್ಯಲಿ ಒಗ್ಗಟ್ಟಿನ ಮಂತ್ರ ಉಟ್ಟು. ಆರೋಗ್ಯವೇ ಭಾಗ್ಯ ಪೊದ್ಯಲಿ, ಆರೋಗ್ಯದ ಕಾಳಜಿ ಬಗ್ಗೆ ಎಚ್ಚರಿಕೆ ಕೊಟ್ಟಳೊ. ಇವರ ಎಲ್ಲಾ ಪದ್ಯಗಳಲಿ ಸಮಾಜದ ಬಗ್ಗೆ ಇರುವ ಕಳಕಳಿ ಎದ್ದ್ ಕಂಡದೆ. ಒಗ್ಗಟ್ ಜನರ್ಲಿ ಎಲ್ಲಿಟ್ಟು, ನಾವೆಲ್ಲವೂ ಒಂದೆ. ನಮ್ಮದ್ ಇದ್ ನಮ್ಮದ್ ವರದಕ್ಷಿಣೆ ಇವೆಲ್ಲ ಸಾಮಾಜಿಕ ಸಂವೇದನೆ ಇರುವ ಪೊದ್ಯಗ. ದೇವರ ಕಂಡಂವ ಯಾರುಟ್ಟು ಪದ್ಯಲಿ ಜನರ ಮೂಢನಂಬಿಕೆಗಳ ಬೊಟ್ಟು ಮಾಡಿ ತೋರ್ಸೆಳೊ. ಯಾಕೆ ಮಾಡಿರೆ ಚಿಂತೆ ಪದ್ಯ ಇಂದಿಗೆ ಹೆಣ್ಣಿನ ಅಗತ್ಯನ ಈ ಪದ್ಯಲಿ ಬರ್‍ದಳೊ. ಚೋಮನ ಕೋಳಿಕಟ್ಟ ಜಾನಪದ ಕ್ರೀಡೆನ ಒಂದು ಸನ್ನಿವೇಶನ ಕಣ್ಣ್ ಮುಂದೆ ತಂದದೆ. ಮೀನ್ ಬೇಟೆ, ಹಳೆ ನೆನ್ಪುಗಳ, ಕೆದಕಿದೆ. ಇದರ್ಲಿ ಇರುವ ಅಂಗರನ ಪಂಜಿ ಬೋಂಟೆ ಒಂದು ತುಳು ಪದ್ಯ. ಇದರೊಟ್ಟಿಗೆ ಆಣ್ ಅವು ಪೊಣ್ಣು, ದಾಯೆ ಪೋಡಿಪಯಾ, ಮಾಮಿ ಇಲ್ಲ್‌ಗ್ ಪೋಯೆ ತುಳು ಪದ್ಯಗಳವೂ ಬರ್‍ದೊಳೊ. ಮಧ್ಯೆ ಮದ್ಯೆಲಿ ಬರ್‍ದ ಚುಟುಕುಗ ಸಹ ಲಾಯಿಕ್ ಒಳ.

### 3. ಅ. ಮೋಟಿಗೂಡೆನ ಮೊದುವೆ

ಹೊದ್ದಟ್ಟಿ ಭವಾನಿಶಂಕರ ಇವು ಬಂಟಮಲೆ ಪ್ರಕಾಶನ, ಗುತ್ತಿಗಾರು, ಇದರ ಮೂಲಕ ಹೊರತಂದ 'ಮೋಟಿಗೂಡೆನ ಮೊದುವೆ' ಒಂದು ಬಹುಭಾಷಾ ಪೊದ್ಯಗ ಇರುವ ಪುಸ್ತಕ 2003ರ್ಲಿ ಬುಡುಗಡೆ ಆತ್. ಇವರ 'ಸಂತೃಪ್ತಿ' ಪೊದ್ಯ ಪುಸ್ತಕ ಮತ್ತು ಈ ಪುಸ್ತಕಲಿ ಕೆಲವೇ ಪದ್ಯಗಳ ಬುಟ್ರೆ, ಹೆಚ್ಚಿನ ಪೊದ್ಯಗ ಎರ್ಡರ್ಲಿ ಸಾ ಒಳೊ.

## 4. ಜೇನೆರಿ

ಇದ್ ಗೌಡ ಕನ್ನಡದ ಲಿಪಿ ಬಳ್ಸಿದ ಸುರೂನ ಪುಸ್ತಕ ಅಂತೇಳಿ ಹೆಗ್ಗಳಿಗೆ ಪಡ್ದುಟು. ಇದರ ಬರ್ದೊವು ಯಶವಂತ ಕುಡಕಲ್ಲು. ಬಂಟಮಲೆ ಪ್ರಕಾಶನ, ಗುತ್ತಿಗಾರು, ಸುಳ್ಯ ತಾಲೂಕು ದ.ಕ. ಇವು 2007 ರ್‌ಲಿ ಇದರ ಪ್ರಕಟ ಮಾಡ್ದೊ. ಒಟ್ಟು 42+18=60 ಪುಟ ಇರುವ ಈ ಪುಸ್ತಕಲಿ 21 ಅರೆಬಾಸೆ ಪದ್ಯಗ ಒಳೊ. ಅದರೊಟ್ಟಿಗೆ ಎ.ಕೆ. ಹಿಮಕರರ ಸುರೂನ ಮಾತ್, ಯಶವಂತ ಕುಡಕಲ್ಲುರವರ ತಿರ್ಗಿ ನೋಡ್ಕನ (ಲೇಖಕನ ಮೊದಲ ಮಾತ್) ಪ್ರೊ.ಕೆ.ಕುಶಾಲಪ್ಪ ಗೌಡ್ರ 'ಗೌಡರು, ಅವರ ಸಂಸ್ಕೃತಿ ಮತ್ತು ಭಾಷೆ ಎಂಬ ಬರಹ. (ಇದ್ ಕನ್ನಡ ಬಾಸೆಲಿ ಉಟ್ಟು) ಮತ್ತು ಅವರ ಗೌಡ ಕನ್ನಡದ ಧ್ವನಿಗಳ ಬಗ್ಗೆ ಒಂದು ಟಿಪ್ಪಣಿ ಎನ್ನುವ ಲೇಖನವು ಮೊದಲ ಭಾಗಲಿ ಉಟ್ಟು.

ಒಂದೇ ವಾರಲಿ ಒಂದು ಸಾವಿರ ಪುಸ್ತಕ ಮಾರಾಟ ಆಗಿ, ಮರ್ ಮುದ್ರಣ ಆದ ರೆಕಾರ್ಡ್ ಯಶವಂತರ ಜೇನೆರಿ ಪುಸ್ತಕಕ್ಕೆ ಉಟ್ಟು. ಅದ್ಭುತ ಚಿಂತಕ, ಬರಹಗಾರ, ನಾಟಕ ಕಲಾವಿದ ಎ.ಕೆ.ಹಿಮಕರ ಇವು ಪ್ರತಿ ಕವನಕ್ಕೆ ಒಂದು ಚಿತ್ರ ಬುಡ್ಸಿ, ವಿಶೇಷ ಮೆರ್ಗ್ ನೀಡ್ಯೊಳೊ.

ಇನ್ನ್ ಯಶವಂತರ ಕವನಗಳ ಬಗ್ಗೆ ಹೇಳ್ದಾದರೆ ಪ್ರತಿಯೊಂದು ಕವನವೂ ನಮ್ಮ ಸುಮಾರು ವರ್ಷ ಹಿಂದೆ ತಕೊಂಡ್ ಹೋದೆ. ಜೊತೆಗೆ ಹಳ್ಳಿಗಳ ಅಂದ್‌ನ ಜೀವನ ಕ್ರಮನ ಕಣ್ಣಿಗೆ ಕಟ್ಟುವ ರೀತಿಲಿ ಬರ್ದೊಳೊ. 'ನೆಂಪು' ಅನ್ನುವ ಕವನ ನಮ್ಮ ಬಾಲ್ಯ (ಸಣ್ಣ ದಿರ್‌ಕನ ಕಳೆದ ದಿನಗ) ನ ನೆನಪು ಮಾಡ್ದೆ. 'ನೀರಡಿ ಕೊಟೆಗೆಲಿ' ಕವನ ಅಂದ್ ನಮ್ಮ ಹಿರಿಯವು ದಿನನಿತ್ಯ ಉಪಯೋಗ ಮಾಡ್ತಿದ್ದ ವಸ್ತ್ ಗಳ ಹಳ್ಳಿಲೇ ಸ್ವಂತ ತಯಾರ್ ಮಾಡ್ತಿದ್ದೊ ಎಂಬ ಅರ್ಥಕೊಟ್ಟದೆ. ಜನ ತುಂಬಾ ಸ್ವಾವಲಂಬಿಗ ಆಗಿದ್ದ ಅಂತ ತೋರ್ಸಿದೆ. ಅಂದ್‌ನ ದಿನಗಳ್‌ಲಿ ನೆಂಟ್ರ್ ಬಾಕನ ಆಗುವ ತಳಮಳನ ಕವನರೂಪಲಿ ನೀಡೆಳೊ. 'ಕೀರ' 'ಪೊನು', 'ಬನ್ನೆಂತೇಳಿದ್ ನೀ' ಕವನಗಳ ಮೂಲಕ ಹಳಿಗಳ್‌ಲಿ ನಡೆವ ಪ್ರೀತಿ ಪ್ರೇಮದ ಬಗ್ಗೆಯೂ ಇಣ್‌ಕಿ ನೋಡುವ ಪ್ರಯತ್ನ ಕಂಡದೆ. ಹಿಂಗೆ ಒಟ್ಟ್ 21 ಕವನಗಳ್‌ಲಿ ಇಡೀ ಗೌಡ್ರ ಸಾಂಪ್ರದಾಯಿಕ ಜೀವನದ ರೀತಿ, ಬಡತನದ ಚಿತ್ರ, ಮನೆಗಳ್‌ಲ್ಲಿ ಹಿರಿಯವರ ಪರ್‌ಂಚೆಲ್ ಎಲ್ಲಾ ಉಟ್ಟು. ಇದ್ ಒಂದು ಕೇವಲ ಕವನ ಪುಸ್ತಕ ಆಗಿರದೆ ಹಿಂದಿನ ಸುಳ್ಯ, ಆಸ್‌ಪಾಸ್‌ನ ಗೌಡ ಜಾತಿಗಳ ಇತಿಹಾಸವೇ ಬಿಚ್ಚಿಟ್ಟದೆ.

## 5. ನೀಲಿ ದಾರಿ

ಡಾ.ಕರುಣಾಕರ ನಿಡಿಂಜಿ ಇವರ ಸುರೂನ ಅರೆಬಾಸೆ ಕವನ ಸಂಕಲನ 'ನೀಲಿದಾರಿ' ಅರೆಬಾಸೆ ಸಾಹಿತ್ಯದ ಸರಕ್ಕೊಂದು ಪೋಣಿಸಿದ ಮುತ್ತು ಇದ್ದಂಗೆ. ಶ್ರೀ ದುರ್ಗಾಪ್ರಕಾಶನ ಪುತ್ತೂರು ಇವು 2014ರ್‌ಲಿ ಪ್ರಕಟಿಸಿದ ನಿಡಿಂಜಿಯವರ ಈ ಪಸ್ಟ್‌ನ ಕವನ ಸಂಕಲನ ಪುಸ್ತಕಲಿ ಒಟ್ಟು 76 ಪುಟ ಉಟ್ಟು. ಕವನ ಪುಸ್ತಕಲಿ ಒಟ್ಟು 33 ಕವನಗ ಒಳ. ಪುಸ್ತಕದ ಕೊನೆಗೆ 'ಪಿರಿಗಂಟ್' ತೇಳುವ

ಅರೆಬಾಸೆ ಶಬ್ದಕೋಶನ ಕೊಡುವ ಮೂಲಕ ಅರೆಬಾಸೆ ಶಬ್ದ ಭಂಡಾರಕ್ಕೆ ತನ್ನ ಕಾಣಿಕೆ ಹಾಕೊಳೊ. ಖ್ಯಾತ ಅರೆಬಾಸೆ ಸಂಶೋಧಕ, ಕನ್ನಡ ಸಾಹಿತ್ಯದ ವಿದ್ವಾಂಸ ಡಾ. ಪುರುಷೋತ್ತಮ ಬಿಳಿಮಲೆ ಇವು ವಿಸ್ತಾರವಾದ ಒಂದು ಮುನ್ನುಡಿನ ಬರ್ದ್ ಕೊಟ್ಟಳೊ. ಕರುಣಾಕರವು ಭಾಷೆ ಬಳ್ಸಿದ ರೀತಿ ಇವುಕೆ ಬಾರೀ ಇಷ್ಟ ಆವುಟುಂತೇಳಿ ಅವರ ಮುನ್ನುಡಿಲೇ ಗೊತ್ತಾದೆ. ನಿಡಿಂಜಿಯವರ ಪುಸ್ತಕದ ಇನ್ನೊಂದು ವಿಸೇಸ ಅಂದರೆ ಅವರ ಮೊದಲ ಮಾತ್. ಒಟ್ಟು 16 ಪುಟಗಳಷ್ಟ್ ದೀರ್ಘ ಇರ್ವ ಅವರ ಮೊದಲ ಮಾತ್‌ಗಳ್‌ಲಿ ಅವರ ಮನಸ್‌ನ ಒಳಗಿರುವ ವಿಸಯಗ ಗೊತ್ತಾದೆ. ಇದರ್ಲಿ ಅವು ಅರೆಬಾಸೆ ಬೆಳ್ದ್ ಬಂದ ಬಗೆನ ಚರ್ಚೆ ಮಾಡೆಳೊ. ಅರೆಬಾಸೆನ ಗೌಡ್ರ ಮನೆಮಾತ್, ಗೌಡ್ರ ಭಾಷೆ ಅಂತ ಹೇಳೆಳೋ. ಇವರ ಪುಸ್ತಕದ ಇನ್ನೊಂದು ವಿಸೇಸ ಅಂದರೆ ಪೊದ್ಯಗಳ ಹೆಸರ್‌ನ ಕೊನೆಗೆ ಬರ್ದಳೊ. ಹೆಚ್ಚಾಗಿ ಹೆಸ್‌ರ್ (ಶೀರ್ಷಿಕೆ) ಮೇಲೆ ಇರ್ದು. ಇದ್ ಪೊದ್ಯದ ತಲೆಬರಹ ಅಲ್ಲ. ಕೆಳಬರಹ ಆವುಟು. ಇದ್ ಇವರ ಕ್ರಿಯಾತ್ಮಕತೆಗೆ ಸಾಕ್ಷಿ. ಇವರ ಕವನಗಳಿಗೆ ಕಳ್‌ದ್ ಹೋದ ದಿನಗಳ ನೆನ್‌ಪು ಮಾಡುವ ಶಕ್ತಿ ಉಟ್ಟು. ಪರಿಸರದ ಬಗ್ಗೆ ಕಾಳಜಿ ಉಟ್ಟು, ಹಾಂಗೆ ತಿಳಿ ಹಾಸ್ಯನೂ ಕಂಡ್ ಬಂದದೆ.

ಹೀಗೊಂದುಟ್ಟು ಸತ್ಯ. ಪೊದ್ಯ ಮಂಗಳೂರು ವಿಶ್ವವಿದ್ಯಾನಿಲಯದ ದ್ವಿತೀಯ ಬಿ ಎಸ್ ಸಿನ 3ನೇ ಸೆಮಿಸ್ಟರ್‌ನ ಕನ್ನಡ ಪಠ್ಯ ಪುಸ್ತಕಲಿ ಸ್ಥಾನ ಪಡ್ದುಟು. ಕೊತ್ತಿಪಾಡ್ ಪೊದ್ಯಲಿ ಬೇರೆಯವರ ಸೊತ್ತಿಗೆ ಆಶೆ ಮಾಡಿಕಾಗದ್ ಎಂಬ ನೀತಿಪಾಠ ಉಟ್ಟು. 'ನಮ್ಮ ಕಾನದ ಚೋಡಿ'ಲಿ ಪ್ರಕೃತಿ ನಾಶದ ಬಗ್ಗೆ ಅವುಕೆ ಇರುವ ಕಾಳಜಿ ಎದ್ದ್ ಕಂಡದೆ. ಇಂದ್‌ನ ದಿನಕ್ಕೆ ಇಂತ ಪೊದ್ಯಗ ಅತೀ ಅಗತ್ಯ. ಮೂರು ಮದ್ದೆ ಹುಗ್ಗೆಗಾಗಿ ಪೊದ್ಯಲಿ ಸಾಮರಸ್ಯದ ಬೊದ್ಕ್‌ಗೆ ಕರೆ ಕೊಟ್ಟೊಳೊ. ಬಿಸು ಹಬ್ಬದ ಆಚರ್ಣೆ ಬಗ್ಗೆ ಅಂವ ಬಾದು ಎಷ್ಟೊತ್ತಿಗೆ? ಪೊದ್ಯಲಿ ಹೇಳೆಳೊ. ಹೇಂಗಿತ್ ಹೇಂಗಾತ್ ಕಾಲಂತೇಳುದು ಪೊದ್ಯ ನಮ್ಮ ಜೀವನ ಅನುಭವನ ಐವತ್ತು ವರ್ಸಕ್ಕೆ ಹಿಂದೆ ತಕಂಡ್ ಹೋದೆ. ಅದೆಲ್ಲ ಈಗ ಕನಸ್ ಅಷ್ಟೆ. ಆದ್ರೂ ನೆನ್ಸಿಕಂಡರೆ ಒಂಥರಾ, ಕುಸಿ ಆಗುವ ಸಂಗತಿ. ಸಾಂತಪಣ್ಣಿ ಸರಾಯ ಕುಡ್ದ್ ಪೊದ್ಯಲಿ ತಿಳಿ ಹಾಸ್ಯ ಉಟ್ಟು. 'ಊರಿಗೆ ಬೇಕೊಬ್ಬ ಗೌಡ'ಪೊದ್ಯ ಗೌಡ್ರ ಸಂಸ್ಕೃತಿ ಬಗ್ಗೆ ತಿಳ್ಸಿದೆ. 'ಆಡ್ಯಾಡಿ ಹೋವ ತಿಂಗ' ಪೊದ್ಯ ತುಳುನಾಡ್‌ನ ಆಟಿ ತಿಂಗಳ ಬಗ್ಗೆ ಉಟ್ಟು. ಒಟ್ಟ್ ಹೇಳ್ದಾದರೆ ನೀಲಿ ದಾರಿ ಪೊದ್ಯಗ ನಮ್ಮ ಬೊದ್ಕುಗೂ ಒಂದು ದಾರಿತೋರ್ಸುವಂಗೆ ಒಳ.

## 6. ಬೇರ್‌ಲಿ–ಚಿಗ್‌ರ್

'ಬೇರ್‌ಲಿ ಚಿಗ್‌ರ್' ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ ಇವು ಬರ್ದ ಪೊದ್ಯ ಪುಸ್ತಕ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯವು 2015 ರ್ಲಿ ಈ ಪುಸ್ತಕನ ಪ್ರಕಟಮಾಡ್ದೊ. ಅಂದ್‌ನ ಅರೆಭಾಷೆ ಅಕಾಡೆಮಿ ಅಧ್ಯಕ್ಷರಾಗಿದ್ದ ಕೊಲ್ಯದ ಗಿರೀಶ್ ಇವು ಇದ್ಕೆ ಮುನ್ನುಡಿ ಬರ್ದ್ ಪ್ರೋತ್ಸಾಹ ನೀಡೆಳೊ. ಈ ಪೊದ್ಯ ಪುಸ್ತಕ ಸಾಹಿತ್ಯದ ಬೇರೆ ಬೇರೆ ಆಯಾಮ ಹೊಂದಿದ

ಪೊದ್ಯಗಳ ಒಳಗೊಂಡುಟು. ಇದರ್‌ಲಿ ಜಾನಪದ, ಭಕ್ತಿಗೀತೆ, ಭಾವಗೀತೆ, ಸೋಬಾನೆ ಮತ್ತೆ ಹಬ್ಬ ಹರಿದಿನಗಳ್‌ಲಿ ನಡೆವ ಆಚರ್ಣೆಗಳ ವಸ್ತ್‌ಗಳ ತಕಂಡ್ ಬರ್ದೊಳೊ. ಒಟ್ಟು 115+7=122 ಪುಟ ಇರುವ ಈ ಪುಸ್ತಕಲಿ 115 ಪೊದ್ಯಗ ಒಳ.

ಅರೆಬಾಸೆಲಿ ದೇವರ ಸ್ತೋತ್ರಗ/ಭಜನೆಗ ಬಾರೀ ಕಡಿಮೆ ಅಂತಲೇ ಹೇಳಕ್. ನಮ್ಮ ಎಲ್ಲಾ ಆಚರಣೆಗಳಲಿ ಹೆಚ್ಚಾಗಿ ತುಳು ಇಲ್ಲರೆ ಕನ್ನಡಲಿ ಪ್ರಾರ್ಥನೆ ಮಾಡಿಕಂಬೊದು ರೂಢಿ. ಭಜನೆ ತಂಡದವೂ ಅರೆಬಾಸೆಲಿ ಹಾಡ್‌ದುಲೆ. ದೇವರ ಪೊದ್ಯಗಳ ಜೊತೆಗೆ ಹಬ್ಬ ಹರಿದಿನಗಳ ಆಚರಣೆ ಬಗ್ಗೆ ಪೊದ್ಯರೂಪಲಿ ಒಳ್ಳೆ ವಿವರಣೆ ಕೊಟ್ಟೊಳೊ. ಜಾನಪದ ಪೊದ್ಯ ಸಹ ಆಚರಣೆಗಳ ಗುರಿಯಾಗಿಸಿ ಇದ್ದಂಗೆ ಉಟ್ಟು. ದೇಶ, ಊರು, ಕೃಷಿಕ, ನಾಡ್, ಪ್ರಕೃತಿ ಹಿಂಗೆ ಈ ಪುಸ್ತಕಲಿ ಇದ್ದ್ ಜೀವನದ ಎಲ್ಲಾ ಸಂಗತಿಗಳಿಗೂ ಜಾಗೆ ಕೊಟ್ಟಳೊ. ಒಮ್ಮೆ ಓದ್‌ಕನ ಎಲ್ಲಾ ವಿಷಯಗ ಕಣ್ಣ ಮುಂದೆ ಬಂದ್ ನಿಂತವೆ. ಇದರ್‌ಲಿ ಇರುವ 'ಬಸ್‌ರಿ ಆಶೆ' ಒಂದು ವಿಭಿನ್ನ ಕವನ. ಇದ್ ನಾಟಿ ವೈದ್ಯದ ಬಗ್ಗೆ ಸಹ ಮಾಹಿತಿ ಕೊಟ್ಟದೆ. ಮೊದುವೆ ಕಾರ್ಯಗಳ ಪ್ರತಿಯೊಂದು ಆಚರಣೆ ಬಗ್ಗೆ ಸಹ ಮಾಹಿತಿ ಉಟ್ಟು. 'ಕೆರೆಗೆ ಹಾರ' ಪದ್ಯಲಿ ಒಂದು ಐತಿಹಾಸಿಕ ಮತ್ತು ಜಾನಪದ ಎರಡನ್ನೂ ಒಟ್ಟಿಗೆ ಹೇಳುವ ಪ್ರಯತ್ನ ಮಾಡೆಳೊ. ಬೇರೆ ಬೇರೆ ಕಥೆಗಳ ಪೊದ್ಯ ರೂಪಲಿ ಬರ್ದ್ ಅರೆಬಾಷೆ ಸಾಹಿತ್ಯದ ಶ್ರೀಮಂತಗೊಳ್ಸಳೊ. ಹಳೆ ಬೇರ್-ಹೊಸ ಚಿಗ್‌ರ್ ಎಲ್ಲಾ ಇವರ ಪೊದ್ಯಗಳ್‌ಲಿ ಇದ್ದ್, ಬೇರ್‌ಲಿ ಚಿಗ್‌ರ್ ಶೀರ್ಷಿಕೆ ಅರ್ಥಗರ್ಭಿತ ಆಗಿ ಉಟ್ಟು.

## 7. ನಮ್ಮೂರ ಹಾಡು ಮತ್ತು ಭಕ್ತಿಗೀತೆಗಳು

ಶ್ರೀಯುತ ಕುಯಿಂತೋಡು ದಾಮೋದರ ಮಾಸ್ಟ್ರ ಬರ್ದ 'ನಮ್ಮೂರ ಹಾಡು ಮತ್ತು ಭಕ್ತಿ ಗೀತೆಗಳು' ಪೊದ್ಯ ಪುಸ್ತಕ ಅಮ್ಮ ಪ್ರಕಾಶನ, ಕಟಪಾಡಿ, ಉಡುಪಿ ಇದರ ಪ್ರಕಾಶನಲಿ 2015ರ್‌ಲಿ ಹೊರಬಾತ್. ಇದರ್‌ಲಿ ಒಟ್ಟು 66 ಪುಟಗ ಇದ್ದ್ 12 ಅರೆಬಾಸೆ ಪೊದ್ಯಗ, 8 ಭಕ್ತಿ ಗೀತೆಗೆ ಮತ್ತು 27 ಬೇರೆ ಬೇರೆ ವಿಷಯಗ ಇರುವ ಕನ್ನಡ ಗೀತೆಗ ಒಳೊ. ಇದ್ಕೆ ಕೊಡಗು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್‌ನ ಅಂದ್‌ನ ಅಧ್ಯಕ್ಷರಾಗಿದ್ದ ಶ್ರೀ ಟಿ.ಪಿ. ರಮೇಶ್ ಇವು ಮುನ್ನುಡಿ ಬರ್ದೊಳೊ.

ಇವರ ಬ್ರಹ್ಮಗಿರಿ ಅರೆಬಾಸೆ ಪೊದ್ಯಲಿ ಇಡೀ ಬ್ರಹ್ಮಗಿರಿನ ಸೌಂದರ್ಯನ ಎರಡೇ ಗೆರೆಗಳ್‌ಲಿ ಕಟ್ಟಿ ಹಾಕೊಳೊ. ಅದ್ ಹಿಂಗೆ ಉಟ್ಟು. ನಿ ಎಂತ ಪೊರ್ಲು ಬೆಟ್ಟನೋಡಿ ಬ್ರಹ್ಮಗಿರಿ, ಸೃಷ್ಟಿಕರ್ತ ಹೊಯ್ದುಟಿಲ್ಲಿ ಚೆಲುವಿನ ಸಿರಿ. ರಾಗಬದ್ಧವಾಗಿ ಹಾಡಿಕೆ ಅನುಕೂಲ ಆಗುವಂಗೆ ಪ್ರಾಸಬದ್ಧವಾಗಿ ರಚನೆ ಮಾಡೆಳೊ. 'ನಿನ್ನ ಮಗ್ಗುಲೆ ನಂಗೆ ಸ್ವರ್ಗವಮ್ಮ' ಪೊದ್ಯಲಿ ಅಮ್ಮನ ಆಸರೆಗೆ ಹಾತೊರವ ಕೂಸುನ ಆಕ್ರಂದನ ಉಟ್ಟು. 'ಎಲ್ಲಾ ನಿನ್ನದೆ' ಕವನಲಿ ಅರ್ಪಣಾಭಾವ ಜೊತೆಗೆ ಪರಿಸರ ಕಾಳಜಿನೂ ಉಟ್ಟು. 'ಭಗಂಡೇಶ ಮುನಿ' ಅರೆಬಾಸೆನ ಒಂದು ಒಳ್ಳೆ ಭಕ್ತಿಗೀತೆ. 'ಕೊಡಗಿನ ಈ ಮಣ್ಣ್' ಅರೆಬಾಸೆನ ಒಳ್ಳೆದೊಂದು ನಾಡಗೀತೆ. ಇಡೀ ಕೊಡಗಿನ

ಜನಗಳ ಸಾಧನೆಗಳ ಕೊಂಡಾಟ ಮಾಡುವ ಹಾಡ್ 'ಶರಣಂ ಶರಣಂ ಅಯ್ಯಪ್ಪ' ಒಳ್ಳೆಯ ಅರೆಬಾಸೆ ಭಕ್ತಿಗೀತೆ. ಅದೇ ರೀತಿ 'ದೇವ ನಿಂಗೆ ಎಷ್ಟ್ ಹೆಸ್ರ್' ಉದಯ ಹಾಡ್ 'ನಮ್ಮ ಕುಲದೈವ' ಒಳ್ಳೆ ಭಕ್ತಿ ಗೀತೆಗ . 'ನನ್ನ ಭಾರತ' ಪೊದ್ಯಲಿ ರಾಷ್ಟ್ರ ಭಕ್ತಿ ಎದ್ದ್ ಕಂಡದೆ. 'ಮನಸೆಂಬ ಮಹಾದೇವ' ಪೊದ್ಯ ತುಂಬಾ ಅರ್ಥಗರ್ಭಿತವಾಗಿಟ್ಟು. ನಮ್ಮ ಚಿಂತನೆಗೆ ಗುಣಾತ್ಮಕವಾಗಿರೊಕು ಎಂಬ ಆಶಯನ ಈ ಪದ್ಯಲಿ ಮಾಸ್ಟ್ರ ವ್ಯಕ್ತಪಡಿಸೆಳೊ.

## 8. ಸರ್ಮ್ಮಾಲೆ

ಪೊದ್ಯ ಪುಸ್ತಕ 'ಸರ್ಮ್ಮಾಲೆ' ನ ಬರ್ದೊವು ಎಂ.ಜಿ.ಕಾವೇರಮ್ಮ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯವು 2015ರ್ಲಿ ಈ ಪುಸ್ತಕನ ಪ್ರಕಟ ಮಾಡ್ದೊ. ಅಂದ್‌ನ ಅರೆಭಾಷೆ ಅಕಾಡೆಮಿ ಅಧ್ಯಕ್ಷರಾಗಿದ್ದ ಶ್ರೀ ಕೊಲ್ಯದ ಗಿರೀಶ್ ಇವು ಅಧ್ಯಕ್ಷರ ನೆಲೆಲಿ ನಾಲ್ಕ್ ಮಾತ್ ಬರ್ದ್ ಕೃತಜ್ಞತೆ ಸಲ್ಲಿಸೆಳೊ. ಇದಕ್ಕೆ ಒಳ್ಳೆ ಮುನ್ನುಡಿ ಬರ್ದ್ ಸಿಂಗಾರ ಮಾಡ್ದೊವು ಸಂಗೀತಾ ರವಿರಾಜ್ ಹೊಸೂರು. ಇದರ್ಲಿ ಒಟ್ಟು 42 ಕವಿತೆಗೆ ಒಳೊ. ಕಾವೇರಮ್ಮ ಅವರ ಮಾತ್‌ಲೇ ಹೇಳ್ದಾದರೆ "ನಲ್ವತ್ತೆರಡು ನೆಣೆಗಳ ಹೋಸಿ, ಓದೋವ್ಕೆ ಬೊಳ್ಪು ಕೊಟ್ಟೊಳೆ. ಇದರ್ಲಿ ಆಕೆರಿನ ಹದಿನೇಳು ಪದಗಳ ನಾ ಅಂಬೆರ್ಪುಲಿ ಬರ್ದೆ" ಅಂತ ಹೇಳ್ ಕಂಡೊಳೊ. ಇದ್ ಅವರ ಒಂದು ಪ್ರಾಮಾಣಿಕತೆನ ತೋರ್ಸಿದೆ. ಆದರೆ ಅವು ಅಂಬೆರ್ಪುಲಿ ಬರ್ದ ಪೊದ್ಯಾಗ ಸಹ ಯಾವುದರ್ಲಿಯೂ ಕಮ್ಮಿ ಇಲ್ಲೆ. ಇದ್ ಅವರ ಪೊದ್ಯರಚನೆನ ತಾಕತ್ತ್‌ನ ತೋರ್ಸಿದೆ. ಅವೇ ಹೇಳುವ ಪ್ರಕಾರ ಅವರ ಹೆಚ್ಚಿನ ಎಲ್ಲಾ ಪೊದ್ಯಾಗ ಹುಟ್ಟಿಕೆ ಕಾರಣ ಅವುಕೆ ಆದ ಜೀವನದ ಅನುಭವಗ.

ಇನ್ ಇದರ ಪೊದ್ಯಗಳ ಬಗ್ಗೆ ಪ್ರತ್ಯೇಕ ಆಗಿ ಹೇಳ್ದಾದರೆ, ಪ್ರತಿಯೊಂದ್ ಸಹ ಅವರ ಜೀವನದ ಅನುಭವದ ಕೊಪ್ಪರಿಗೆಂದ ಹೆಕ್ಕಿ ತೆಗ್ದಂಗೆ ಉಟ್ಟು. ಅರೆ ಬಾಷೆ ಮಾತಾಡುವ ಗೌಡ್ರ ಮನೆಗಳ ಹಲವು ಸಂಗತಿಗಳ ಬಿಚ್ಚಿಸೆಳೊ. ಇದೊಂದು ಮುಂದಿನ ತಲೆಮಾರಿಗೆ ಇವು ಕೊಟ್ಟ ಕೊಡ್ಗೆ. ಹಳ್ಳಿಲೇ ಸಿಕ್ಕುವ, ಸ್ವಂತ ತಯಾರ್ ಮಾಡಿಕಂಕೆ ಆಗುವ ವಸ್ತುಗಳ ಬಗ್ಗೆಯೂ ಹೇಳೆಳೊ. ಉದಾಹರಣೆಗೆ ಅವರ 'ಉಗ್ಗವ್ವ'. ಪೊದ್ಯಲಿ 'ಒಗ್ಯಾಕೆ ನರುವೊಳು, ಮೀಯಾಕೆ ಸೀಗೆ, ಸಾಬಾನ್ ಅದ್‌ಕೆ ಬೇಕಿಲ್ಲೆ. ಬೆಣ್ಣೆಕರ್ತೆ ಸೊಪ್ಪುಲಿ ಒಡ್ಯೆನ ಮಾಡಿ ತಲೆನ ಪೊರ್ಲುಲಿ ತೊಳಿತಿತ್'. ಇದು ತೊಂಭತ್ತ್ ವರ್ಷದ ಬೊದ್ಕಿದ ಅಜ್ಜನ ಬಗ್ಗೆ ಹೇಳ್ತಾ, ಆ ಜೀವನ ಶೈಲಿನ ಕಣ್ಣ ಮಂದೆ ನಿಲ್ಸೆಳೊ. ಅಜ್ಜಪ್ಪ ಪೊದ್ಯಲೂ ಅದೇ ಅಂಶನ ಮತ್ತೆ ಒತ್ತಿ ಹೇಳಿ, "ಬೆಳ್ಜೆರಿಲಿ ನೆಟ್ಟಿಗೆ ನೀರ್‌ನ ಹೊಯಿತಿದ್ದೊ. ಜರ-ಗಿರ ಬಾತಿಲ್ಲೆ, ಮೊದ್ದುನು ತಾತಿಲ್ಲೆ, ಕಾಡ್ನ ಸೊಪ್ಪು ಚೋಡ್ನನೀರೆ ಮೊದ್ದು". ಇವರ 'ಬಾಳೆಕುರ್ಲೆ', 'ಉಪ್ಪಣ', 'ಕರ್‌ಮೊಲೆ ಉಂಡತ್', 'ಚಂಗುಳಿ', 'ಸರ್ಮ್ಮಾಲೆ ದೀಪ', 'ಕೂಸುನ ಬಂಜ', ಇವೆಲ್ಲ ಇಡೀ ಅರೆಬಾಸೆ ಗೌಡ್ರ ಜೀವನ ಕ್ರಮದ ಬಗ್ಗೆ ತಿಳ್ಸಿ ಕೊಟ್ಟದೆ. ಜೊತೆಗೆ ಅರೆಬಾಸೆ ಸಾಹಿತ್ಯನೂ ಸಹ ಒಪ್ಪ ಓರಣ ಮಾಡಿ ಲಾಯ್‌ಕ್‌ಲಿ ಬರೆಕೆ ಆದೆ

ಅಂತ ಈ 'ಸರ್ಮಾಲೆ' ಪೊದ್ಯ ಪುಸ್ತಕದ ಮೂಲಕ ತೋರ್ಸಿ ಕೊಟ್ಟೊಳೊ. ಹೆಣ್ಣ್‌ನ ಭಾವನೆಗಳಿಗೆ ಸಹ ಇವರ ಕವಿತೆಲಿ ಜಾಗ ಉಟ್ಟು. 'ಆಟಿ ಹಬ್ಬ' ಕವನ ಕಳೆದ ದಶಮಾನಗಳ್‌ಲಿ ಇದ್ದ ಎಲ್ಲಾ ಆಟಿ ಆಚರಣೆಗಳ ಬಗ್ಗೆ ಹೇಳ್ದ್. ಈ ಜೀವನ ಕ್ರಮಗ ಈಗ ಇಲ್ಲೆ. ಆದರೆ ಅದರ ನೆನಪೇ ಒಂದು ಮನಸ್ಸಿಗೆ ಖುಷಿ ಕೊಟ್ಟದೆ. ಅವರ 'ಹಡ್ಡೆ ನಾಯಿ' ಪೊದ್ಯಲಿ ತಿಳಿ ಹಾಸ್ಯ ಇದ್ದ್, ಒಂದು ಮನೋರಂಜನೆನೂ ಉಟ್ಟು. 'ಸುಳ್ಯ ಜಾತ್ರೆ' ಪದ್ಯ ಒಂದು ಊರ್‌ಲಿ ಆವ ಜಾತ್ರೆನ ಸಂಪೂರ್ಣ ಚಿತ್ರಣನ ಕೊಟ್ಟದೆ. 'ಸರ್ಮಾಲೆ' ನಿಜವಾಗಿಯೂ ನಮ್ಮ ಹೊಗೆ ಹಿಡ್ದ. ಅಟ್ಟಕೆ ಹೋದ ಸಂಸ್ಕೃತಿನ ಮತ್ತೆ ಕೆಳಗಿಳ್ಸಿ ತೊಳ್ದ್ ನೋಡುವ ಪ್ರಯತ್ನ.

## 9. ತೋರಣ

'ತೋರಣ' ಕವನ ಸಂಕಲನದ ಮೂಲಕ 'ಅರೆಬಾಸೆ ಸಾಹಿತ್ಯದ ಮೊದಲ ತ್ರಿಪದಿ' ಕವಿ ಶ್ರೀ ಬಾರಿಯಂಡ ಜೋಯಪ್ಪರವರ ಮೂಲಕ ರಚನೆ ಆದ್ ಅರೆಬಾಸೆ ಮಾತಾಡುವ ಎಲ್ಲೊವ್ಕೂ ಕುಸಿ ಕೊಡುವ ವಿಚಾರ. ಅರೆಬಾಸೆಲಿ ತ್ರಿಪದಿಗಳ ಬರ್ದ್ ಪ್ರಕಟಮಾಡ್ದ ದೊಡ್ಡಸ್ತಿಕೆ ಬಾರಿಯಂಡ ಜೋಯಪ್ಪನವುಕ್ಕೆ ಸಂದದೆ. ವೃತ್ತಿಲಿ ಮಾಸ್ಟ್ರ ಆಗಿ ಪ್ರವೃತ್ತಿಲಿ ಸಾಹಿತಿ, ಕವಿ, ಚಿಂತಕ, ಅನುವಾದಕ, ಸಂಪಾದಕ ಆಗಿ ಶ್ರೀ ಬಾರಿಯಂಡ ಆರ್.ಜೋಯಪ್ಪನವು ಬರ್ದ 'ತೋರಣ' ಕವನ ಸಂಕಲನ, ನಿಜವಾಗಿಯೂ ಅರೆಬಾಸೆ ಸಾಹಿತ್ಯದ ಹೆಬ್ಬಾಗಿಲಿಗೆ ಕಟ್ಟಿದ ತೋರಣವೇ ಆವುಟು. ಈ ಕವನ ಸಂಕಲನನ 2016ರ್ಲಿ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯವು ಪ್ರಕಟ ಮಾಡೆಳೊ. ಅಂದ್‌ನ ಅರೆಬಾಸೆ ಅಕಾಡೆಮಿನ ಅಧ್ಯಕ್ಷ ಕೊಲ್ಯದ ಗಿರೀಶ್ ಇವು ಅಧ್ಯಕ್ಷರ ನೆಲೆಲಿ ನಾಲ್ಕು ಒಳ್ಳೆ ಮಾತ್ ಬರ್ದ್ ಪ್ರೋತ್ಸಾಹ ನೀಡೆಳೊ. ಒಟ್ಟು 89+12=101 ಪುಟಗ ಇರುವ ಈ ಕವನ ಸಂಕಲನಲಿ ಒಟ್ಟು 51 ಪೊದ್ಯಗ ಒಳೊ. 'ತೋರಣಕ್ಕೊಂದು ರಂಗೋಲಿ' ಅಂತ ಶೀರ್ಷಿಕೆ ಕೊಟ್ಟ್ ಶ್ರೀಮತಿ ಜಯಮ್ಮ ಚೆಟ್ಟಿಮಾಡ ಇವು ಲಾಯ್‌ಕ್‌ನ ಮುನ್ನುಡಿ ಬರ್ದೊಳ.

ಈ ಕವನ ಸಂಕಲನದ ಬಗ್ಗೆ ಹೇಳ್ವಾದರೆ, ಬಾರಿ ಸುಲಬದ ಬಾಸೆ, ಒಳ್ಳೆ ಉಪಮೆಗೆ. ಆಡ್‌ಮಾತ್‌ನ ಜೋಡ್ಸಿರುವ ಕ್ರಮ ಅರೆಬಾಸೆನ ಐಸ್‌ರನ ಇನ್ನೂ ಹೆಚ್ಚು ಮಾಡಿಟು. 'ತೋರಣದ ಸುರೂನ ಪೊದ್ಯ 'ಉದಯರಾಗಕ್ಕಾಗಿ', ಇದೊಂದು ಸಣ್ಣ ಪೊದ್ಯ, ಆದರೆ ಒಂದು ಪ್ರಕೃತಿನ ವರ್ಣನೆ ಉಟ್ಟು. ಹಂಗೆ ನೋಡಿರೆ ಜೋಯಪ್ಪರವು ಒಬ್ಬ ಪ್ರಕೃತಿ ಆರಾಧಕನಂಗೆ ಕಂಡು ಬಂದವೆ. ಅವರ 'ಬರ' ಕವನಲಿ ಪ್ರಕೃತಿ ನಾಶದ ಬಗ್ಗೆ ಒಂದು ಆತಂಕನ ವ್ಯಕ್ತಪಡಿಸಳೊ. ದನಗಳ ಶಿಸ್ತ್, ಕೊಡ್‌ಗ್ ಹೆಂಗುಟ್ಟು? ಸೃಷ್ಟಿಲಯ, ಮಳೆಹಕ್ಕಿ, ಮುಂಗಾರುಮಳೆ ಹಿಂಗೆ ಹೆಚ್ಚಿನ ಕವನಗಳಲಿ ಪರಿಸರ ಕಾಳಜಿ, ಪ್ರಕೃತಿ ಪ್ರೇಮ ಕಂಡ್ ಬಂದದೆ. ಅವರ 'ಅದ್ಭುತ ಎಲ್ಲ ಹಿಂಗೆ' ಕವನಲಿ ವೈಚಾರಿಕತೆ ಎದ್ದ್ ಕಂಡದೆ. 'ಅವ್ವ, ನೀ ಎಲ್ಲೊ' ಕವನಲಿ ಭಾವನೆ-ಪ್ರೀತಿ ಉಟ್ಟು. 'ಸುಡುಕುಣಿ ಮತ್ತೆ ಮರ' ಕವನ

ಜೀವನದ ಕಟು ಸತ್ಯನ ಬಿಚ್ಚಿಟ್ಟದೆ. ನೀತಿ ಪಾಠ ಹೇಳುವ ಈ ಕವನ ನಮ್ಮ ಓದಿಸಿದೆ. ಇವರ ಕವನಗಳ್‌ಲಿ ಸಹ ಹಳ್ಳಿ ಮೊದ್ದುಗಳ ಬಗ್ಗೆ ದಾಖಲಾವುಟು. 'ನಾಡ್ ಮದ್ದ್' ಇದ್ಕೆ ಒಂದು ಒಳ್ಳೆ ಉದಾರ್ಣೆ. ಸರ್ವಜ್ಞನ, 'ಕೊಟ್ಟು ಬಣ್ಣಿಸಬೇಡ, ಕೊಟ್ಟಾಡಿ ಕೊಳಬೇಡ, ಪೊದ್ಯಕ್ಕೆ ಸರ್‍ಯಾಗಿ ಇರುವ ತ್ರಿಪದಿ 'ಕೊಟ್ಟಾವ್ ಆಡ್ದುಲೆ, ಕೊಡದವರ್ದೇ ರಂಪ ಲೊಟ್ಟೆ ಬುಟ್ಟಿವೆ ನೂರೆಂಟ್. ಕಂದ ಲೋಕಕೆ ಗೊತ್ತುಟ್ಟು ಈ ಗುಟ್ಟು. ಇದರ್ಲಿ ಶಬ್ದಗಳ ಕಟ್ಟಿಕೊಂಡ ರೀತಿ ನಿಜಕ್ಕೂ ಅದ್ಭುತ ಆಗಿ ರಚನೆ ಆವುಟು. ಒಂದು ಆದರ್ಶ, ನೈತಿಕ ಸಮಾಜಕ್ಕೆ ಬೇಕಾಗುವ ನುಡಿಮುತ್ತುಗಳ ತ್ರಿಪದಿ ಮೂಲಕ 'ತೋರಣ' ಲಿ ಪೋಣಿಸಿ ಇಸೆಳೊ. ರೈತನ ತೊಳಲಾಟ, ಹಳ್ಳಿನ ಬೊದ್ಕು, ಪ್ರಕೃತಿನ ಸೂಕ್ಷ್ಮತೆಗೆ, ಪಾಪದೊವು, ದೊಡ್ಡೊವು,, ಹಿಂಗೆ ದಿನವು ನಡೆವ ಬೊದ್ಕ್‌ನ ಎಲ್ಲಾ ಸತ್ಯಗಳ ಈ ತ್ರಿಪದಿಲಿ ಕಾಂಬಕೆ ಸಿಕ್ಕಿದೆ.

## 10. ಅನುಭವಧಾರೆ

ಅರೆಬಾಸೆ ಸಾಹಿತಿಗಳ ಸಾಲ್‌ಲಿ ನಿಲ್ಲುವ ಬೆಳ್ಳಿತಾರೆಗಳ್‌ಲಿ ಶ್ರೀ ಹೊದ್ದೆಟ್ಟಿ ಭವಾನಿಶಂಕರ ಸಹ ಒಬ್ರೊ. ಇವು ಅರೆಬಾಸೆ ಸಾಹಿತ್ಯಕ್ಕೆ ಒಂದು ಗೌರವ ತಂದುಕೊಟ್ಟ ಸಾಧಕ. ಇವರ 'ಅನುಭವಧಾರೆ' ಅರೆಬಾಸೆ ಕವನ ಸಂಕಲನಲಿ ಒಟ್ಟು 46 ಪೊದ್ಯಗ ಇದ್ದ್ ಈ ಪುಸ್ತಕಲಿ 90+8, ಸೇರಿ ಒಟ್ಟು 98 ಪುಟ ಉಟ್ಟು. 2017ರ್ಲಿ ಅರೆಬಾಸೆ ಸಾಹಿತ್ಯ ಅಕಾಡೆಮಿಯವು ಪ್ರಕಟಮಾಡ್ದ ಈ ಪುಸ್ತಕಕ್ಕೆ ಅಂದ್‌ನ ಅಧ್ಯಕ್ಷರಾಗಿದ್ದ ಕೊಲ್ಯದ ಗಿರೀಶ್ ಇವು ಅಧ್ಯಕ್ಷರ ನೆಲೆಲಿ ತಮ್ಮ ಮಾತ್‌ಗಳ ಬರ್ದ್ ಕೃತಜ್ಞತೆ ಸಲ್ಲಿಸೊಳೊ. ಇದ್ಕೆ ಬೇರೆ ಯಾರ ಕೈಲೂ ಮುನ್ನುಡಿ ಬರ್ಸಿತಿಲೆ. ಆದರೆ ಹೊದ್ದೇಟಿವೆ 'ಬರ್ದವನ ಮಾತ್' ಅಂತ ಹೇಳಿ ತಮ್ಮ ಬರವಣಿಗೆಗಳ ಬಗ್ಗೆ ಸವಿಸ್ತಾರ ಆಗಿ ಹೇಳ್ಕೊಂಡೊಳೊ. ನಮ್ಮ ಬಾಸೆನ ಮಾತಾಡಿಕೆ ನಾವು ನಾಚಿಕೆ ಮಾಡಿಕೆ ಬೊತ್ತು ಎನ್ನುವ ಸಂದೇಶ ನೀಡೆಳೊ. ಅರೆಬಾಸೆಲಿ ಬಂದ ಮೊದಲ ಕವನ ಸಂಕಲನ ಯಶವಂತ ಕುಡಕಲ್ಲು ಅವರ 'ತೊಂಬರ', ಆದರೆ ಅರೆಬಾಸೆಲಿ ಕವನ ಬರ್ದ ಸುರೂನ್ ವ್ಯಕ್ತಿ ಅಂತ ಸರ್ಕಾರ ಗುರ್ತಿಸಿದ್ ಶ್ರೀ ಹೊದ್ದೆಟ್ಟಿ ಭವಾನಿಶಂಕರ ಇವರ.

ಇವು ಬರ್ದ ಕವನ ಸಂಕಲನ 'ಅನುಭವಧಾರೆ' ನಿಜವಾಗಿಯೂ ಜೀವನ ಅನುಭವದ ಪೊದ್ಯಗಳ ಕೊಪ್ಪರಿಗೆ. ಅದರ ಪುಸ್ತಕದ ರೂಪಲಿ ಪ್ರಕಟಮಾಡಿ ನಾವುಗೆ ಧಾರೆ ಎರ್ದ್ ಕೊಟ್ಟೊಳೊ. ಅವರ ಪೊದ್ಯ 'ಅಕಾಡೆಮಿ'ಲಿ ನಮ್ಮ ಬಾಸೆಗೆ ಈ ಸಿಕ್ಕಿದ ಮಾನ್ಯತೆನ ಉಪಯೋಗಿಸಿಕೊಂಡ್ ಅದರ ಬೆಳ್ಸೊಕು ತೇಳುವ ಬಯಕೆನ ವ್ಯಕ್ತಪಡಿಸೊಳೊ. ಇದ್ ನಮ್ಮ ಜನಾಂಗದ ಒಗ್ಗಟ್ಟಿಗೂ ಬೇಕು ಅಂತ ತಿಳ್ಸೆಳೊ. ಇವು ಹೆಣ್ಣ್ ಮಕ್ಕಳ ಬಗ್ಗೆ ಅತೀ ಗೌರವ ಕೊಟ್ಟು ಬರ್ದೊಳೊ. ಸಮಾಜಲಿ ಹೆಣ್ಣಿಗೆ ಆಗುವ ಅವಮಾನ-ಅಪಮಾನ, ಅಬದ್ರತೆ ಹಿಂಗೆ ಎಲ್ಲಾ ವಿಷಯಗ ಅವರ 'ಹೆಣ್ಣ್‌ಗೆ ರಕ್ಷಣೆ ನಮ್ಮ ಮನೆ ಜಾಲೊಳಗೆ' ಪೊದ್ಯಗಳ್‌ಲಿ ಉಟ್ಟು. 'ತೀರ್ಥಯಾತ್ರೆ' ಕವನಲಿ ಆದರ್ಶಗಳ ಪ್ರತಿಪಾದನೆ ಮಾಡೆಳೊ. 'ಭಯಂಕರ ಬೇಟೆ', 'ನಾಟಿ ಮಾಡೊಮೊ', 'ಕುದ್ಕನ ಬೀಲ ಕಡ್ತ್

ಅಜ್ಜಿ', 'ಹಳ್ಳಿ ಜನರ ಹಿರಿಮೆ', 'ಓಣ್‌ಂಗಿಲ್ ಮೀನ್' ಇವೆಲ್ಲ ನಮ್ಮ ಹಳ್ಳಿ ಬೊದ್ಕುನ ನೆಂಪಿಸಿದೆ. 'ಬರಲಿ ಹೊಸ ಪಕ್ಷ' ಕವನಲಿ ರಾಜಕೀಯ ಆಶಯವೂ ಉಟ್ಟು. 'ಬಡವ' ಪೊದ್ಯಲಿ ಆರ್ಥಿಕತೆಯೂ ಉಟ್ಟು. 'ಒಂದೆ ನುಡಿ ಒಂದೆ ನಡೆ' ಕವನದ ಮೂಲಕ ಒಗ್ಗಟ್ಟಿನ ಮಂತ್ರನ ಹೇಳಿಕೊಟ್ಟೊಳೊ. 'ಕಂಬಳ' ಪೊದ್ಯ ಗ್ರಾಮೀಣ ಕ್ರೀಡೆ ಬಗ್ಗೆ ತಿಳ್ಸಿದೆ. 'ಕುಡ್‌ಕ ಗಂಡ' ಪೊದ್ಯಲಿ ನೀತಿ ಪಾಠನ ಮಾಡೆಳೊ. 'ಕಿಡ್ದಾಸ ಹಬ್ಬ' ಮರ್ತ್ ಹೋದ ಹಬ್ಬದ ಆಚರಣೆಗಳ ನೆರಪಿಸಿದೆ. 'ವಧುವರರ ಅನ್ವೇಷಣೆ ಹುಡುಕಾಟ' ಪದ್ಯ ನಮ್ಮ ಗೂಡೆಗ ಹೈದಂಗ ಸಹ ಓದುವ ಹಾಂಗೆ ಮಾಡ್ದೆ. 'ಗಡಗಡ ಸುದ್ದಿ ಗಡ' ಪೊದ್ಯ ನಮ್ಮ ಹಳ್ಳಿನ ಆಹಾರ ಕ್ರಮನ ಬಗ್ಗೆ ಹೇಳ್ದೆ.

ಹಿಂಗೆ ಇವರ ಕವನ ಸಂಕಲನಲಿ ಜನರ ಸಾಮಾಜಿಕ, ರಾಜಕೀಯ, ಆರ್ಥಿಕ, ಕೌಟುಂಬಿಕ, ಆಚರಣೆ, ಪದ್ಧತಿ, ಎಲ್ಲವೂ ಇದ್ದ್ ಒಂದು ಮೂಲ ಗ್ರಂಥದ ರೂಪಲಿ ಹೊರಬಂದುಟು.

## 11. ತಿಂಗೊಳ್ ಬೆಳ್‌ಕ್

ಶ್ರೀ ಯುತ ಯೋಗೀಶ ಹೊಸೊಳಿಕೆ, ಒಬ್ಬ ಯುವ ಪ್ರತಿಭೆ. ಇವರ ಪೊದ್ಯ ಪುಸ್ತಕ 'ತಿಂಗೊಳ್ ಬೆಳ್‌ಕ್' ಅರೆಬಾಸೆ ಸಾಹಿತ್ಯಕ್ಕೆ ಒಂದು ಬೆಳ್‌ಕ್ ತೋರ್ಸಿದಂಗೆ. ತಿಂಗಳ್ ಬೆಳ್‌ಕ್ ಅಂತ ಹೇಳ್‌ಕನ ಒಂದು ತಂಪಿನ ಅನುಭವ ಆದೆ, ಜೊತೆಗೆ ಮನಸ್ಸಿಗೆ ಉಲ್ಲಾಸವೂ ಆದೆ. ಇವರ ಪೊದ್ಯಗಳ ಓದಿಕನವೂ ಅದೇ ಅನುಭವ ಆದೆ. 2017ರ್ಲಿ ಕಿರಣ ರಂಗ ಅಧ್ಯಯನ ಸಂಸ್ಥೆ ಪ್ರಕಟನೆ ಮಾಡ್ದ ಈ ಪುಸ್ತಕಲಿ ಒಟ್ಟು 55 ಪುಟ ಇದ್ದ್ 32 ಪದ್ಯಗ ಒಳ. ಇದ್ಕೆ ಸುರುನ ಮಾತ್ ಬರ್ದೊವು ಪ್ರಖ್ಯಾತ ವಿದ್ವಾಂಸ ಟಿ.ಜಿ ಮುಡೂರು. ಶ್ರೀಯುತ ಸುಬ್ರಾಯ ಸಂಪಾಜೆ ಇವು ಸಹ ಇದ್ಕೊಂದು ಮುನ್ನಡಿ ಬರ್ದೊಳೊ. ಪ್ರಗತಿಪರ ಚಿಂತಕ, ಹಾಗೂ ಸಾಹಿತಿ ಶ್ರೀ ಎ ಕೆ ಹಿಮಕರ ಇವು ನೇರ ಶಬ್ದಗಳ್‌ಲಿ ಹೊಗಳಿ-ತೆಗಳಿ ತಿಂಗಳ ಬೆಳ್‌ಕ್‌ಗೆ ಹೊಳಪು ಕೊಟ್ಟೊಳೊ. ಇವರ ಪ್ರಕಾರ ಈ ಪುಸ್ತಕಲಿ ಓದೊವುಕೆ ನೆಗೆ ಉಟ್ಟು, ಕುಸಿ ಉಟ್ಟು, ಕೆಲವು ಸಂಗತಿಗಳ ಓದಿಕನ ಸಂಕಟನೂ ಆದೆ, ಬೇಜಾರನೂ ಆದೆ. ತಲೆ ಕೆಡ್ಸಿಕಂಬ ವಿಚಾರಗಳೂ ಒಳ, ಗಾದೆ ಮಾತು ಉಟ್ಟು, ನೀತಿ ಮಾತ್‌ಗಳೂ ಒಳ. ಹಳಬರ ರಾಗ, ಗೂಡೆನ ಮೋಡಿ, ತುಂಟಾಟ, ಜೀವನ ಸತ್ಯಗ ಎಲ್ಲವೂ ಸೇರ್ದ ಸಂಗತಿಗಳ ಗಂಟು ಮೂಟೆ ಇರುವ ಪುಸ್ತಕ. ಒಟ್ಟಾರೆ ಹೇಳ್ದಾದರೆ ಯೋಗೀಸರ ಚಿಂತನೆಗಳ್ಲಿ ಜೀವನ ಮೌಲ್ಯಗಳ ಬಗ್ಗೆ ಜಾಸ್ತಿ ಇರದು ಎನ್ನುವ ಅಂಶ ಕಂಡ್ ಬಂದದೆ.

'ನೆನ್ಪಾದೆ ನಂಗೆ ಒಂದೊಂದೆ' ಪೊದ್ಯ ಹಿರಿಯರ ಹಿತವಚನಗಳಿಗೆ ಬೆಲೆ ಕೊಡೊಕು, ಅದು ಪರ್‌ಂಚೆಲ್ ಅಲ್ಲ, ಜೆಡ್ಡ್ ಬತ್ತವೂ ಅಲ್ಲ. ಅದರ್ಲಿ ಸಾರ ಉಟ್ಟು ಅಂತೇಳುವ ಅಭಿಪ್ರಾಯ ವ್ಯಕ್ತ ಆವುಟು. ಒಳ್ಳೆ ಮಾರ್ಗದರ್ಶನ ನೀಡಿಕೆ ಅನುಭವವೇ ಮುಖ್ಯ ಹೊರ್ತು ಶಿಕ್ಷಣ ಅಲ್ಲ. 'ಅಂದ್ ಹುಣ್ಣಿಮೆ ಇರ್ಲ್' ಪೊದ್ಯಲಿ ಒಂದು ಮನೆತುಂಬ ಜನ ಇರುವ ಸುಖಸಂಸಾರದ ಬಣ್ಣನೆ ಉಟ್ಟು.

ಹಾಸ್ಯ ಉಟ್ಟು, ಕಷ್ಟ ಸುಖನ ಒಟ್ಟಿಗೆ ಸ್ವೀಕಾರ ಮಾಡುವ ಮನಸ್ಥಿತಿನೂ ಉಟ್ಟು. 'ರೈತರ ಕೂಂಗು' ಪೊದ್ಯ ಕೃಷಿಕರ ಬೇನೆನ ತಿಳ್ಸಿದೆ. 'ಮೊದುವೆ ಮನೇಲಿ' ಪೊದ್ಯ ಒಂಚೂರು ತುಂಟಾಟದ ಪೊದ್ಯ. ಬಹುಶಃ ಹೈದಂಗಳಿಗಾಗಿ ಬರ್ದಂಗೆ ಕಂಡದೆ. 'ಮರೆಕಾಗದ್' ಪೊದ್ಯಲಿ ನೀತಿ ಪಾಠ ಉಟ್ಟು. 'ಅಮ್ಮನ ಕಥೆ' ಲಿ ಅಮ್ಮನ ಮನದಾಳದ ಭಾವನೆಗ ಒಳೊ, ಜೊತೆಗೆ ಒಂದು ಸಂವೇದನೆ ನೂ ಉಟ್ಟು. 'ಗಾಳದಮೊಲ್ರ್' ಪೊದ್ಯ ನಮ್ಮ ಮಕ್ಕಳಾಟಿಕೆನ ನೆನ್ಪಿಸಿದೆ. 'ಕಡೆ ಉಸುರು' ಪೊದ್ಯ ಓದಿರೆ ಕಣ್ಣಂಚಿಲಿ ನೀರಿ ತರ್ಸಿದೆ. 'ಏನ್ ಹೇಳ್ರೆ ಸಣಪಾ...?' ತಿಳಿ ಹಾಸ್ಯ ಇರುವ ಲಾಯಿಕ್‌ನ ಪೊದ್ಯ. 'ಪೋಯಿಯ ಭಾವ' ಪೊದ್ಯವು ಮನ್ಸ್‌ಗೆ ಕುಸಿ ಕೊಟ್ಟದೆ. 'ಗೂಡೆ ಹುಚ್ಚು' ಪೊದ್ಯ ಕಿಚ್‌ಕಿಳಿ ಇಟ್ರೊ, ನೀತಿ ಪಾಠ ಉಟ್ಟು. 'ಮೊಣ್ಣನ ಬೊದುಕು' ಒಬ್ಬ ಕಷ್ಟ ಜೀವಿನ ಬಗ್ಗೆ ತಿಳ್ಸಿದೆ. 'ಪ್ರೀತಿ ಇಲ್ಲದ ಗೂಡೆ' ಕವನ ಜೀವನಲಿ ಪ್ರೀತಿ ಎಷ್ಟ್ ಮುಖ್ಯ ಅಂತ ಪ್ರತಿಪಾದನೆ ಮಾಡ್ದೆ. 'ಮೊದವೆಲಿ' ಪೊದ್ಯ ಜೀವನದ ಸಿಹಿ-ಕಹಿಗಳ ಒಟ್ಟಿಗೆ ಕಾಣುವ ಒಂದು ಪ್ರಯತ್ನ. 'ಹಳ್ಳಿ ಹೈದ ಶಾಲೆಗೆ ಹೋಗಿ ಬಾಕನ' ಒಂದು ಕತೆನ ರೂಪದ ಪೊದ್ಯ. ಒಟ್ಟ್ ಹೇಳ್ದಾದರೆ ಇವರ ಪೊದ್ಯಗಳಲಿ ಬೇರೆ ಬೇರೆ ಬಗೆಗ ಉಟ್ಟು. ಒಂದೇ ಶೈಲಿಗೆ ಅಂಟಿಕಂಡ್ ಬರ್ತಿಲೆ. ಅರೆಬಾಸೆ ಸಾಹಿತ್ಯಕ್ಕೆ ಇದೊಂದು ಒಳ್ಳೆ ಕೊಡುಗೆ.

## 12. ನೆಗೆಬೇಕು ಕೇದಗೆ ಗೊನೆ ಹಾಂಗೆ

ಡಾ. ಕರುಣಾಕರ ನಿಡಿಂಜಿಯವರ ಎರ್ಡನೇ ಪೊದ್ಯ ಪುಸ್ತಕ 'ನೆಗೆಬೇಕು ಕೇದಗೆ ಗೊನೆ ಹಾಂಗೆ' 2019ರ್ಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯವು ಪ್ರಕಟ ಮಾಡ್ದೊ. ಪುಸ್ತಕದ ಹೆಸ್‌ರ್‌ನ ಜೊತೆಗೆ ಸಣ್ಣ ಅಕ್ಷರಲ್ಲಿ ತಮ್ಮ ಸಂದೇಶನ ಈ ರೀತಿ ಬರ್ದೊರ್ಳೊ. 'ಬಾಕನ ಹೋಕನ ನಡುಲಿ ಸಿಕ್ಕಿಕನ ಸಣ್ಣದಾದರು ಒಂದು ನೆಗೆಬೇಕು' ಇಡೀ ಪೊದ್ಯ ಪುಸ್ತಕದ ಮುಖ್ಯ ಆಶಯವೇ ನೆಗೆ, ಇದುವೇ ಮೊನಿಷನ ಸಂಬಂಧಕ್ಕೆ ಅಡಿಗ್‌ಲ್ಲ್ ಅಂತ ಬರ್ದವರ ಪ್ರತಿಪಾದನೆ. ಒಟ್ಟ್ 47 ಪುಟ ಇರುವ ಈ ಪೊದ್ಯ ಪುಸ್ತಕಲಿ 21 ಪೊದ್ಯಗಳ ಬರ್ದಳೊ. ಅಕಾಡೆಮಿಯ ಅಧ್ಯಕ್ಷ ಪಿ ಸಿ ಜಯರಾಮ್‌ವು ಅಧ್ಯಕ್ಷರ ಸ್ಥಾನಂದ ನಾಲ್ಕ್ ಮಾತ್ ಬರ್ದ್ ಒಳ್ಳೆದಾಗಲಿ ಅಂತ ಹೇಳ್ಳೈಳೊ. ಪುಸ್ತಕ ಪ್ರಕಟನಾ ಸಮಿತಿ ಸಂಚಾಲಕ ಶ್ರೀ ಎ.ಕೆ. ಹಿಮಕರವು ನಿಡಿಂಜಿಯವರ ಶಿಸ್ತ್ ಬದ್ಧ ಬರವಣಿಗೆಗೆ ಶಾಬಾಸ್ ಕೊಟ್ಟೊಳೊ. ಇದ್ಕೆ ಮುನ್ನುಡಿ ಬರ್ದೊವು ಶ್ರೀ ಕುತ್ಯಾಳ ನಾಗಪ್ಪ ಗೌಡ (ಕಿರಣ) ಇವು. ಇವು ಮುನ್ನುಡಿ ಮಾತ್ರ ಕನ್ನಡಲೇ ಬರ್ದೊಳೊ. ನಿಡಿಂಜಿಯವ್ ಈ ಪುಸ್ತಕಕ್ಕೆ ಸಹ ಉದ್ದದ ಕೃತಜ್ಞತೆಗಳ ಸಾಲ್‌ಗಳ ಬರ್ದೊಳೊ.

'ನೆಗೆಬೇಕು' ಪೊದ್ಯ ನಮ್ಮ ಬೊದ್ಕ್‌ಗೆ ಅತೀ ಅಗತ್ಯದ ಸಲಹೆ. 'ಹಳಬರ ವ್ಯಾಜ್ಯ' ಪೊದ್ಯ ಆಸ್ತಿಪಾಸ್ತಿ ಹೊಂದಿದ ಹಳ್ಳಿಯವರ ಬೊದ್ಕ್‌ಗೆ ಹತ್ರ ಇರುವ ಸಂಗತಿ. 'ನೀರ್‌ನ ಜಗಳ' ಇಂದಿನ ದಿನಲಿ ಸಾಮಾನ್ಯ ವಿಚಾರ ಆವುಟು.

'ಹೋದು ಬೆರೀ ಕೈಲಿ' ಪೊದ್ಯ ಮೊನಿಷ ಜೀವನದ ಕಟುಸತ್ಯನ ತಿಳ್ಸಿದೆ. ಇವರ ತತ್ವ ಪದ ಅರೆಬಾಸೆ ಸಾಹಿತ್ಯಲಿ ಒಂದು ಒಳ್ಳೆ ಪ್ರಯೋಗ. 'ಅಯ್ಯೋಂತೇಳ್‌ದೆ ಬಾಳೆ' ನಮ್ಮ ಆಧುನಿಕ ಕೃಷಿನ ವಿಡಂಬಿಸಿ ಬರ್ದ ಪೊದ್ಯ. ಬಾಳೆನ ಮಹತ್ವನ ಸಹ ಈ ಪೊದ್ಯಲಿ ಬರ್‍ದ್ದೊಳೊ. 'ಆಟಿ ತಿಂಗ ಬಾತ್' ಪೊದ್ಯ ಆಟಿ ತಿಂಗಳ್ ಕಣ್ಣಮುಂದೆ ಬಂದಂಗೆ ವರ್ಣಿಸಳೊ. 'ಮುಂಗುಲಿ' ಪೊದ್ಯ ಹಾಡಿಕೆ ಬಾರೀ ಲಾಯಿಕ್ ಆಗುವಂಗೆ ಬರ್‍ದ್ದೊಳೊ. ದಾಟಿ ರಾಗ ನೋಡಕ್ಕನವೇ ಹಾಡೊಮೊ ಅಂತ ಮನಸ್ಸಾದೆ. 'ಬಿರಿಂಬಿರಿ ಓಡ್ತ್' ಪೊದ್ಯ ನಮ್ಮ ಪರಿಸರದ ಬಗ್ಗೆ ಕಾಳಜಿ ತೋರ್‍ಸುವ ಆಶಯ ಹೊಂದಿಟು. 'ಕುದ್ಕ ಹೊತ್ತ ಕೋಳಿ' ಹಿಂದೆ ಕೋಳಿ ಸಾಂಕೊವುಕೆ ಇದ್ದ ಕಷ್ಟ, ಕುದ್ಕಂಗಳ ತೊಂದರೆ, ಹಿಂಗೆ ಹಳ್ಳಿಗಳ ಜೀವನ ಕತೆಗಳ ತಿಳ್ಸಿದೆ. 'ಆ ಕಾಲ' ಪೊದ್ಯಲಿ ನಮ್ಮ ಹಳೆ ತಲೆಮಾರ್‌ನ ಕಳ್‌ದ್ ಹೋದ ವಿಷಯಗಳ ವಿವರಿಸೆಳೊ. 'ಒಮ್ಮೊಮ್ಮೆ' ಪೊದ್ಯದ ಶೈಲಿಯೆ ವಿಭಿನ್ನ ಆಗಿ ಉಟ್ಟು. 'ಸಂತೆ' ಪೊದ್ಯಲಿ ಜನರ ಜೀವನಕ್ರಮ ಹೆಂಗೆ ಬದಲಾವಣೆ ಆಗ್ತಾ ಉಟ್ಟು ಅಂತ ಗೊತ್ತಾದೆ. 'ಸಾಂತಪ್ಪನ ಹುಲಿ ಬೇಟೆ' ಒಂದು ಬೇಟೆನ ಅನುಭವನ ಕೊಟ್ಟದೆ. 'ಸಾಂತನ ಪಂಚೆ' ಒಂದು ತಿಳಿ ಹಾಸ್ಯ ಇರುವ ಪೊದ್ಯ. 'ಸಾಂತಪ್ಪ ಮರ ಕೊಚ್ಚಿತ್' ಹಳ್ಳಿಲಿ ಕೆಲಸಮಾಡೊವರ ಸಾಹಸಗಳ ಒಂದು ತುಣುಕು ಆಗಿ ಕಂಡದೆ. 'ಸಾಂತನ ಆಮ್ಲೇಟ್' ಒಂದು ಮನಸ್ಸಿಗೆ ಕುಸಿ ಕೊಡುವ ಪೊದ್ಯ. 'ಅದ್ ಬಂದ ಮೇಲ್' ಪೊದ್ಯಲಿ ಮೊದುವೆ ಆದ ಮೇಲೆ ಸಡನ್ ಆಗಿ ಒಬ್ಬ ಗಂಡಸ್‌ನ ಜೀವನಲಿ ಆಗುವ ಚೇಂಜ್‌ಗಳ ಮನ್ಸಿಗೆ ನಾಟು ವಂಗೆ ಹೇಳೆಳೊ. ಅದರ ಓದಿರೆ ಮೊದುವೆ ಆದವ್ಕೆ ಅವರ ಕತೆನವೇ ಹೇಳ್ದಂಗೆ ಅನ್ನಿಸಿದೆ. ಹಾಂಗೇ ಮೊದುವೆ ಆಗದವುಕೆ ಹಿಂಗೆಲ್ಲ ಉಟ್ಟ ಮದುವೆ ಆದ ಮೇಲೆ ಅಂತ ಆಶ್ಚರ್ಯ ಆದು. ಆದ್ರೂ ನಿಡಿಂಜಿಯವು ಹೆಣ್ಣ್ ಬಂದ ಮೇಲೆ ಮನೆಗೂ ನೆಮ್ಮದಿ, ಮನಸ್ಸಿಗೂ ಕುಸಿ. ಅದರೊಟ್ಟಿಗೆ ಸಣ್ಣ ತಲೆಬಿಸಿನೂ ಉಟ್ಟು ಅಂತ ಒಂದು ಎಚ್ಚರಿಕೆನೂ ಕೊಟ್ಟೊಳ. ಒಟ್ಟುಲಿ ಹೇಳ್ದಾದರೆ ಡಾ ಕುರುಣಾಕರ ನಿಡಿಂಜಿಯವರ 'ನಗೆಬೇಕು ಕೇದಗೆ ಗೊನೆ ಹಾಂಗೆ' ಪುಸ್ತಕ ನಮ್ ಮನಸ್ಸ್‌ನ ಒಳಗಿಂದಲೇ ನೆಗಾಡ್ಸಿದೆ. ಇವರ ಕೆಲವು ಪದ್ಯಗ ಒಳಗಿಂದೊಳಗೆ ಗಂಭೀರವಾಗಿ ಸಹ ಇರ್ದು ನೋಡ್ರೆ ಸಾಹಿತ್ಯಲಿ ಅವುಕೆ ಇರುವ ಹಿಡ್‌ತನ ಸಹ ತೋರ್‍ಸಿ ಕೊಟ್ಟದೆ.

ಅರೆಬಾಸೆ ಪೊದ್ಯಗ ಇತರ ಯಾವುದೇ ಬಾಸೆನ ಪೊದ್ಯಗಳಿಗೆ ಕಮ್ಮಿ ಇಲ್ಲೆ. ಓದುಗರ ಆಸಕ್ತಿಗೆ ತಕ್ಕಂತ ಪೊದ್ಯಗ ಅರೆಬಾಸೆಲಿ ಒಳೊ. ಅನುವಾದ ಮತ್ತೆ ಅನುಕರಣೆ ಅರೆಬಾಸೆ ಪದ್ಯಗಳ್‌ಲಿ ಕಮ್ಮಿ ಇದ್ದ್ ಅರೆಬಾಸೆ ಕವಿಗ ಸ್ವಂತಿಕೆ ಮತ್ತೆ ಸ್ವಾಭಿಮಾನನ ಉಳ್ಸಿಕೊಂಡೊಳೊ.

✍ ಡಾ. ಪುರುಷೋತ್ತಮ ಕೆ.ವಿ. ಕರಂಗಲ್ಲು

ಮಕ್ಕಳ ವಿಭಾಗ

# ಕೊರೊನಾದ ವಿರಾಮಲಿ

ಶಾಲೆಗೆ ಹೋಗ್ತಾ ಇರಕನ ರಜಯಿದ್ದಿದ್ದರೆ ವಳ್ಳದಿತ್ತ್‌ತ ಮನ್‌ಸಿಗೆ ಆಗ್ತಾಯಿತ್ತ್. ಪರೀಕ್ಷೆಗ ಅರ್ಧಲಿ ನಿತ್ತ್ ಏಳನೆ ತರಗತಿಗೆ ಬಂದೊಳೆ. ಕೊರೆನಾ ಮಾರಿ ಕಾಯಲ ವಿಶ್ವನೆಲ್ಲಾ ಬಿಗಿಯಾಗಿ ಹಿಡ್ಕಂಡ್ ಜನಜೀವನನ ತಾರಾಮಾರಾ ಪ್ರಪಾತಕ್ಕೆ ತಳ್ಳಿತ್.



ಸಾಮಾನ್ಯಾಗಿ ಮಕ್ಕ ಮನೆಲೆ ಇದ್ದರೆ ಅಮ್ಮಂದ್ರ್‌ಗೆ ತಲೆಬೇನೆ ಆದೆ–ಜಗಳ ಹೊಡ್‌ಕಂಬೋದು ಅಷ್ಟೊತ್ತಿಗೆ ಅಮ್ಮಂದ್ರ ಕೈ ಮಕ್ಕಳ ಬೆನ್ನ್‌ಗೆ ಬಾರ್‍ಸದು ಎಲ್ಲವರ ಮನೆಲುಯಿದ್ದದೆ. ಸುರುಲಿ ಎಲ್ಲಾ ಕುಸಿ ಆಗ್ತಾಯಿತ್ತ್. ದಿನ ಕಳ್‌ದಂಗೆ ಮನೆ ಜೈಲಾತ್. ಅಮ್ಮನ ಕೈ ಅಡ್‌ಗೆ ತಿಂಡಿ ತಿಂಬೊದು, ಟಿ.ವಿ., ಮೊಬೈಲ್ ನೋಡುದು ಸಾಕಾಗಿ ಹೋತು. ಹೊರಗೆ ಬಾಕಾಗದ್‌ತೇಳಿ ಪೋಲಿಸ್‌ನವು ಸಾರ್‌ಕನ ದೊಡ್ಡವು ಮೂಡಣ ಮೆಟ್ಲ್‌ಲ್ ದಾಟಿಕೆ ಬುಟ್ಟ್‌ತ್‌ಲೆ. ಹಂಗಾಗಿ ನಡೆಯೊದು ಮಾತಾಡುದು ಮರ್‌ತೇ ಹೋದಂಗಾತ್. ಸ್ನೇಹಿತರ್‌ನ ಕಾಂಬಕೆ ಮಿಸ್ ಮಾಡುವ ಪಾತ ಕೇಳಿಕೆ ಆಸೆ ಆದೆ. ಹೊರಗೆ ಹೋಗಿ ಆಡೊಕು, ಸೈಕಲ್ ಬುಡೊಕುತ ಗ್ಯಾನಾದೆ.

ಮಕ್ಕಳೊಟ್ಟಿಗೆ ಅಪ್ಪಂದರ್‌ಸನ ಕೆಲ್‌ಸಕೆ ಹೋಗದೆ ಮನೆಲೆಯಿದ್ದೊ. ನಮ್ಮಪ್ಪನೂ ಕೊರೊನಾ ರಜೆಲಿ ಮನೆಗೆ ವೈಟ್‌ವಾಶ್ ಮಾಡ್ದೊ, ನಾನು ತಮ್ಮನು ಗೊಂಬೆಗಳ್‌ನ ತೊಳ್ದ್ ಒಣ್‌ಗಿಸಿದೊ. ನಮ್ಮ ಅಪ್ಪ ನಮಿಗೆ ಸ್ಕೇಟಿಂಗ್ ತೆಗ್ದ್ ಕಲ್‌ಸಿಕೊಟ್ಟೊ. ನಾವಿಬ್ಬರೂ ಇಡಿ ರೂಮುಗಳಿಗೆಲ್ಲಾ ಹೋಗಿ ಕಲ್ತೊ. ಸ್ವಲ್ಪ ದಿನ ಕಳೆಕನ ಅದೂ ಬೋರಾತ್. ಅಪ್ಪ ಕಾಲೇಜ್‌ಗೆ ಹೋಕನ ಕಲೆಕೆ ತೆಗ್‌ದ ಕೀ ಬೋರ್ಡ್‌ನ ಬಾರ್‍ಸಿಕೆ ಕಲ್ಸಿದೊ. ಸುರುಗೆ ನಾನ್ ಬರ್ತ್‌ಡೇ ಪದಕೆ ಬಾರ್‍ಸುದು ಕಲ್ತೆ.



ಒಂದಿನ ಮೊಬೈಲ್‌ಲಿ ಮಂಡಲ ಆರ್ಟ್ ನೋಡ್ದೆ. ಅದರ್‌ನ ನೋಡಿ ಪೆನ್‌ಲಿ ಚಿತ್ರ ಬುಡ್‌ಸಿ ಮಂಡಲ ಆರ್ಟ್‌ನ ನಾನೆ ಕಲ್‌ತ್‌ಕಂಡೆ. ಆದರೂ ಕೊರೊನ ಹೋತ್‌ಲೆ. ಶಾಲೆನು ಸುರಾತ್‌ಲೆ. ಲಾಕ್‌ಡೌನ್ ಮುಗ್‌ದ ಮ್ಯಾಲೆ ಅಪ್ಪ ಅವ್ಮ ನಾವೆಲ್ಲವೂ ಜೀಪ್‌ಲಿ ತ್ವಾಟಕ್ಕೆ ಹೋಗ್ತಾಯಿದ್ದೊ. ಅಲ್ಲಿ ನಾಯಿಗಳೊಟ್ಟಿಗೆ ಆಟ–ಕೋಳಿಗಳ್‌ನ ಬೆರ್‌ಸಿ ಹಿಡಿಯೊದು, ಹಣ್ಣ್ ಕೊಯ್ಯೊದು ಮಾಡಿ ಗದ್ದೆಲಿ ಆಟ



ಆಡ್ತಾಯಿದ್ದೊ. ಟಿಲ್ಲರ್ ಹೂಡ್ದ ಗದ್ದೆಲಿ ಕೆಸ್‌ರ್‌ಲಿ ಓಡಿ ಬಿದ್ದ್ ಹೊರ್‌ಳಾಡ್‌ದೊ. ಹಸ್ ಕರ್ ಹಾಕಿ ಹಾಲ್ ಕುಡಿಯೊದು ಕಂಡೊ. ಹಿಂಗೆ ಕುಷಿ ಆಗ್ತಾಯಿತ್ತ್.

ನಾವು ಅವ್ವನ ಬೋರಾದೆತೇಳಿ ಏನಾರ್ ಕೆಲ್‌ಸ ಕೊಡವ್‌ತೇಳ್‌ಕನ ಅವ್ವ ರೊಟ್ಟಿ ಮಾಡಿಕೆ ಕಡಂಬಿಟ್ಟ್ ಮಾಡಿಕೆ ಕಲ್ಸಿದೊ. ನಾನ್ ಪ್ರೂಟ್ ಸಲಾಡ್, ತರ್ಕಾರಿ ಸಲಾಡ್ ಮಾಡ್ದೆ.

ಕೊರೊನಾ ಲಾಕ್‌ಡೌನ್ ವಿಷಯಲಿ ನಮ್ಮ ದೊಡ್ಡಪ್ಪ, ದೊಡ್ಡಮ್ಮ ಬೆಂಗಳೂರ್‌ಂದ ಬಂದ್ ಒಂದುವರೆ ತಿಂಗಯಿದ್ದೊ. ಅವರ ಮಕ್ಕತೇಳ್ರೆ ನಂಗೆ ಅಕ್ಕ ಅವುಳು ನಾನೂ ಸೇರಿ ಅವ್ವನ ಪೆಟ್ಟಿಗೆ ಹುಡ್ಕಿ ಅವ್ವನ ಹಳೆ ಸೀರೆಲಿ ಡೇರೆ ಕಟ್ಟಿ ಅದರೊಳಗೆ ಅಡ್‌ಗೆ ಆಟ ಆಡಿ ತಮ್ಮಂದ್ರ್‌ಗೆ ಇಕ್ಕಿದೊ. ಅವು ಮಣ್ಣ್‌ನ ಕಲ್‌ಸಿ ಕಡಂಬಿಟ್ಟ್ ಮಾಡ್ದೊ. ಹಿಂಗೆಲ್ಲಾ ನಮ್ಮ ರಜದ ಕತೆ.



ನಾನ್ ಅವ್ವ ತಾತಂಗೆ ಮೊಬೈಲ್‌ಲಿ ಮೀಟಿಂಗ್ ಮಾಡ್ದು ಎಲ್ಲಾ ವಿಷಯಗಳ್‌ನ ಕಲ್‌ಸಿ ಕೊಟ್ಟೆ. ಈಗ ಅವು ನಂಗೆ ಅರೆಬಾಷೆಲಿ ಮೆಸೇಜ್ ಮಾಡುವೆ. ಹಿಂಗಾರಲಿ ಬಂದ ಅರೆಬಾಷೆ ಕವನಗಳ್‌ನ ಇಂಗ್ಲೀಷ್‌ಲಿ ಬರ್‌ದ್ ಬಾಯಿ ಪಾಟ ಮಾಡ್ದೆ. ಹಿಂಗೆ ನಾವೂನೂ ನಮ್ಮ ಅರೆಬಾಷೆನ ಕಲಿಯಕೆ ಪ್ರಯತ್ನ ಪಡ್ತಾವೊಳೊ.



ಇದ್ ನಾನ್ ಪೆನ್ನ್‌ಲಿ ಮಾಡ್‌ದ ಮಂಡಲ ಆರ್ಟ್. ಸಮಯನ ವ್ಯರ್ಥ ಮಾಡದೆ ಏನಾರ್ ಕೆಲ್‌ಸ ಮಾಡಿಕಂಡಿದ್ದರೆ ಅರೆಬಾಷೆನ ಓದಿಕೆ ಕಲಿಯಕ್ - ಸಂಸ್ಕೃತಿನ ಉಳ್‌ಸಕ್- ಕಲೆ ಸಾಹಿತ್ಯನ ಬೆಳ್‌ಸಕ್‌ತೇಳ್ದು ನನ್ನ ಅಭಿಪ್ರಾಯ. ವಿಶ್ವಲಿ ಎಷ್ಟೋ ಬಾಷೆಗ ಅಳ್‌ದ್ ಹೋಗ್ತಾಯಿರುದರ್‌ನ ನಾವು ಓದ್ಯೊಳೊ. ಸದ್ಯ ನಮ್ಮ ಅರೆಭಾಷೆ ಶಾಶ್ವತ ಆಗಿ ವಳಿಯಲಿ.

ಇನ್ನೂ ಶಾಲೆನೂ ಸುರಾತ್‌ಲೆ, ಕೊರೊನಾ ಹೋತ್‌ಲೆ. ಒಮ್ಮೆ ಬ್ಯಾಗ ಶಾಲೆ ಬಾಗ್‌ಲ್ ತೆಗ್ಸ್ ದೇವ್‌ರೆ. ಆನ್‌ಲೈನ್ ಕ್ಲಾಸಿಗಾಗಿ ಮಕ್ಕಳಿಗೆಲ್ಲ ಪೋನ್ ಬಾತ್. ಅದರ್‌ನ ವಳ್ಳ ರೀತಿಲಿ ಬಳ್‌ಸೊಕುತೇಳ್ದು ಅಪ್ಪನ ಆಜ್ಞೆ.

✍ ಮಾನ್ಯತಾ ಬೈತಡ್ಕ

ಕವನ

# ಏನ್ ಓದಿದರಿ?



ಕೊರೊನಾ ಬಂದ್ ದೇಶಕ್ಕೆಲ್ಲಾ ಲಾಕ್‌ಡೌನ್ ಹೆಸ್‌ರಾತ್।
ಸಮಯ ಕಳಿಯೊದು ಹೆಂಗೆ?
ತ್ವಾಟಕೆ ಹೋಕೆ ಬಸ್ಸ್‌ಯಿಲ್ಲೆ
ಜನ ಗದ್ದೆಬುಟ್ಟ್ ಸುರು ಮಾಡ್ಯೊಳೊ
ಕೆಸನಗೆಂಡೆ ಅರ್‌ಶಣ ಕೃಷಿ
ಕೃಷಿಗು ಮನ್‌ಸಂಗೆ ಬಂದದೆ ಕಾಯಲ?
ಇದರೊಟ್ಟಿಗೆ ಹೂಗಿಡ ತರ್ಕಾರಿಗು ಕಾಯಲ!!
ಮನೆಲಿ ಎಷ್ಟ್‌ತೇಳಿ ಸುಮ್ಮನೆ ಮಲ್‌ಗುದು ಟಿ.ವಿ. ನೋಡ್ದು

ಒಂದಿನ ನಾನ್ ಜಾನಕಿ ಆಂಟಿ ಮನೆಗೆ ಹೋದೆ–ಏನಾರ್ ಪುಸ್ತಕವುಟ್ಟಾ
ನಮ್ಮವುಕೆ ಬಾರಿ ಬೋರುಗಡಾತೇಳ್‌ಕನ ಕೊಟ್ಟೊ 2 ಪುಸ್ತಕ
ತಕೊಂಡೋಗಿ ಕೊಟ್ಟೆ ನಮ್ಮವಕೆ! ವಾರಲಿ ಮತ್ತೆ ಕೇಳ್ದೊ
ಇನ್ನ್ ಪುಸ್ತಕ ತಕಬಾತ, ನಂಗೆ ಆಶ್ಚರ್ಯ ಆತ್ ಇದೇನಪ್ಪಾ
ಓದುವ ಹುಚ್ಚು ಇವುಕೆತೇಳಿ ಮೊಕಕೆ ಮಾಸ್ಕ್ ಹಾಕಂಡ್
ಯಾರಾರ್ ನೋಡುವೆನಾತೇಳಿ ಅತ್ತಿತ್ತ ನೋಡಿಕಂಡೆ

ಯಾಕೆತೇಳ್ರೆ ದಾರಿಲಿ ಪೋಲಿಸ್‌ನವರ ಮೈಕ್‌ನ ಆರ್ಭಟ!!
ನಮ್ಮವು ಒಂದುವರೆ ತಿಂಗಳ್‌ಲಿ ಹದ್‌ನೆಂಟ್ ಪುಸ್ತಕ ಓದಿದೊ!
ಮತ್ತೆ ಹೇಳ್ದೊ ನಂಗೆ ಈಗ ವಳ್ಳ ಜ್ಞಾನ ಬಾತ್!
ಇನ್ನ್ ನಂಗೆ ಸಮಾರಂಭಕ್ಕೆ ಹೋಕೆ ಅಂಜಿಕೆಯಿಲ್ಲೆ
ದಿಬ್ಬಣದ ಮುಖ್ಯಸ್ಥಾಗಿ ಹೋಕು ತಯಾರಾತ್‌ತ

ಓದಿದ ಪುಸ್ತಕತೇಳ್ರೆ ಅಂತಿಂತದಲ್ಲ
ಐನ್‌ಮನೆ ಬಗ್ಗೆ, ಕೊಡಗಿನ ಇತಿಹಾಸ, ಗೌಡ ಸಂಸ್ಕೃತಿ ಇತಿಹಾಸ
ಕಾಟಿಬೆಟ್ಟದ ಕತೆಗ ಕಾಸ್ತಾಳಿ ಸಂವಹನ ಕಾವ್ಯ–ಹೇಳ್ತಾ ಹೋದರೆ ಕೇಳಿ
ಯಾರಾರ್ ಈ ಕಾಲಲಿ ಇಷ್ಟ್‌ಪುಸ್ತಕ ಓದಿದವು ವಳೊನಾ?
ಎಲ್ಲಾ ಕೊರೊನಾ ತಂದ ವಿರಾಮಂದ ಆದಲ್ಲದೆ ಮತ್ತೆಂತಾ?

✍ ರೇಖಾ ಕುದುಪಜೆ

## ಕಣ್ಮರೆಯಾಗುತ್ತಿರುವ ಪರಿಕರದ ಪರಿಚಯ

# ಮೊಡ್ಪಾಳೆ

ಮೊಡ್ಪಾಳೆಂತ ಹೇಳ್ರೆ ಕಮ್ಮುನ ಹಾಳೆಲಿ ಮಾಡ್ವ ಟೊಪ್ಪಿ. ಇದರ ಮೊಟ್ಪಾಳೆ, ಮಡ್ಪಳೆ, ಕೊಟ್ಪಾಳೆ ಅಂತ ಅರೆಬಾಸೆಲಿ ಕರ್ದವೆ. ಮುಟ್ಪಾಲೆ, ಮುಟ್ಟಪಾಲೆ, ಮುಟ್ಟಂಬಾಲೆಂತ ತುಳುಲಿ ಹೇಳ್ವೆ. ಮಲೆನಾಡ್ಲಿ ಇದರ ಹಾಳೆಕೊಟ್ಟೆಂತೇಳಿ ಕರ್ದವೆ. ಮಂಡೆಹಾಳೆ ಅಂತ ಉಡುಪಿ ಕಡೆ ಹೇಳ್ವೆ, ಇದರ ಇಂಗ್ಲಿಸ್ಲಿ ಅರೆಕಾ ಲೀಫ್ ಹ್ಯಾಟ್‌ಂತ ಹೇಳ್ವೆ. ಮೊಡ್ಪಾಳೆಲಿ ಹಲವು ವಿದಗ ಉಟ್ಟು. ಅಡ್ಡಮೊಡ್ಪಾಳೆ ಅಡ್ಡವಾಗಿ ದರಿಸುವ ಹಾಳೆಯ ಟೊಪ್ಪಿ, ಗೋಂಪ ಮೊಡ್ಪಾಳೆ ದೊಡ್ಡ ಇರುವ ಮೊಡ್ಪಾಳೆ, ಕಣ್ಣಿಮೊಡ್ಪಾಳೆ ಈಂದ್ನ ಬೊಳ್ಳಿನ ಹೆಣ್ದ್ ಅಲಂಕಾರ ಮಾಡ್ದ ಮೊಡ್ಪಾಳೆ, ಕೊಂಬುಮೊಡ್ಪಾಳೆ ಇದ್ ವಿಸೇಸಾಗಿ ಒಂದ್ ಪಕ್ಕ ಚೂಪು ತುದಿ ಇರ್ವ ಮೊಡ್ಪಾಳೆ, ನೆರಿಮೊಡ್ಪಾಳೆ ಇದು ನೆರಿಗೆ ಇರ್ವ ಮೊಡ್ಪಾಳೆ



ಇದ್ ನೋಡಿಕೆ ಮೊಟ್ಟೆಯಾಕಾರ ಅಗಿ ಇದ್ದದೆ. ಮೊಡ್ಪಾಲೆಗೆ ಕಡೆ ಕೊಡಿಂತ ಉಟ್ಟು. ಕೊಡಿ ಬಾಗ ಕೊಟ್ಟುನ ಆಕಾರ ತಲೆ ಮುಂಡ ಬಾಗಕ್ಕೂ ಕಡೆ ಬಾಗ ತಲೆ ಹಿಂಬಾಗಕ್ಕೂ ಇದ್ದದೆ. ಇನ್ನ್ ಮೊಡ್ಪಾಲೆನ ಎಡ ಪಕ್ಕ ಮತ್ತೆ ಬಲ ಪಕ್ಕ ಹಾಲೆನ ಮಡ್ಚಿ ಕಟ್ಟುವೆ. ಎರಡು ಪಕ್ಕಲಿ ಹಾಳೆನ ಮಡ್ಚಿದ ನೆರಿಗೆಗ ಇದ್ದ್ ಮೊಡ್ಪಾಳೆಗೆ ಒಂದ್ ಪೊರ್ಲುನ ರೂಪೊ ಕೊಟ್ಟವೆ.

ಮೊಡ್ಪಾಳೆಂತ ಹೇಳ್ವ ಹೆಸ್ರ್ ಬಾರಿ ಪೊರ್ಲು ಉಟ್ಟು. ಮೊಟ್+ಪಾಲೆ ಹಿಂಗೆ ವಿಂಗಡಿಸಕ್. ಅದರೆ ಮೊಟ್, ಮೊಟ್ಟೆ ಅಂತ ವಿಸೇಸ ಅರ್ತ ಕೊಡುವ ಸಬ್ದ ನಮ್ಮ ಅರೆಬಾಸೆಲಿ ಇಲ್ಲೆ. ಇದ್ ತುಳು ಸಬ್ದದ ಮುಟ್ಪಾಳೆಯಿಂದ ಬಂದಿರ್ದು. ತುಳುಲಿ ಮುಟ್ಟೆ ಅಂದರೆ ತಲೆ ಎಂಬ ಅರ್ತ ಉಟ್ಟು. ಮೀನುತ ಮುಟ್ಟೆ (ಮೀನ್ನ ತಲೆ), ಉಚ್ಚುತ ಮುಟ್ಟೆ (ಹಾವ್ನ ತಲೆ), ಯಾರಾದರೂ ದೂರಂದ ಗದ್ದೆ ಪುಣಿಲಿ ಬಾಕನ ಕಂಡರೆ "ಏರ್ನವೊ ಮುಟ್ಟೆ ತೊಜುಂಡು, ಎರ್ಂದ್ ಗೊತ್ತಾಪುಜಿ" (ಯಾರ್ದೊ ತಲೆ ಕಂಡದೆ, ಯಾರ್‌ಂತ ಗೊತ್ತಾದ್ಲೆ) ಂತೇಳುವ ಮಾತ್ ಉಟ್ಟು. ಮುಟ್ಪಾಳೆ, ಮೊಟ್ಪಾಳೆ ಅಂತ ಅಪಬ್ರಂಸ ಆವುಟೇನೊ ಅಂತ ಊಹೆ ಅಷ್ಟೆ. ಹಂಗೆನೆ ಮೊಡ್ದ+ಪಾಲೆ ಅಂದ್ರೆ ಹಾಲೆನ ಮೊಡ್ದ್ ಮಾಡ್ದರನ್ದ ಮೊಡ್ಪಾಲೆ ಅಗಿರ್ದು. ಅದರೆ ಈ ಪದನ ನಾಮಪದದ ನೆಲೆಲಿ ನೋಡಿರೆ ಮೊಡ್ಪಾಲೆ ಕ್ರಿಯಾಪದ ಅಗಿ ಬಾಕೆ ಇಲ್ಲೆಂತ ಕಂಡದೆ. ಇದರ ರೂಪ ನೋಡಿಕನ ಮೊಟ್ಟೆನಂಗೆ ಕಾಣ್ವ ಕಾರಣ ರೂಪಂದ ಹೆಸರ್ ಬಾತ್‌ಂತ ಅನ್ಸಿದೆ.

ಮೊಡ್ಪಾಲೆನ ನಲಿಕೆ ಜನಾಂಗದವು ಮೊಡ್ದವೆ. ದೈವದ ಕೋಲ ಕಟ್ಟ್ವ ನಲಿಕೆ ಜನಾಂಗವ್ರ ಕೆಲ್ಸ ಪತ್ತನಾಜೆ ಮುಗ್ದದೆ. ಆಮೇಲೆ ಮಳೆಗಾಲಲಿ ಮೊಡ್ಪಾಳೆನ ಹೆಣೆವ ಕೆಲ್ಸ ಮಾಡ್ವೆ. ಹಾಳೆಗಲ್ಲಿ ಮರ್ಪಾಲೆ, ನೆಯಿಪಾಲೆಂತ ವಿದ ಉಟ್ಟು. ಮರ್ಪಾಲೆ ಸೆಗಣಿ ಕೆರೆಕನ ಬಳಸ್ವೆ. ಮರ್ಪಾಲೆ ಗಟ್ಟಿಯಾಗಿ ಇದ್ದದೆ. ಬಗ್ಗ್ಸಕನ ಬಗ್ಗುದ್ಲೆ. ಅದರ ಮರಕೆಡ್ಡಿಂತೇಳ್ವೆ. ಮೊಡ್ಪಾಳೆಗೆ ನೆಯಿಪಾಲೆ ಲಾಯ್ಕ್, ಇದ್ ಮೆತ್ತಂಗೆ ಅಗಿ ಲಾಯಿಕಿಲಿ ಬಗ್ಗಿಸಿಕೆ ಆದೆ. ಅದರ ಎರಡ್ ಪಕ್ಕ ತಲೆ ಅಳತೆ ಹಿಡಿವಸ್ಟ್ ಕೊಯ್ದ್ ನೆರಿ ಬರುವಂಗೆ ಮಾಡೊಕ್. ಕೊಡಿನ ಮೊಡ್ಚಿ ಕೊಟ್ಟು ಬರುವಂಗೆ ಮಾಡಿ ಬೊಳ್ಳಿ ಕಟ್ಟೊಕ್. ಈ ಬೊಳ್ಳಿ ಈಂದ್ ಮರದ ಕಣ್ಣಿ ಬೊಳ್ಳಿ ಇಲ್ಲರೆ ದಡ್ಪಾಲೆ ಮರದ ಜೋಂಕು ಬೊಳ್ಳಿನ ಸೂಜಿಲಿ ಹಾಕಿ ನೆಯ್ದುವೆ. ಇದರ ನೆಯ್ಯಕೆ ಲಾಯಿಕ್ನ ಕೆಣಿ ಬೇಕ್. ನೆಯ್ಯುವನ ಕೈ ಚಾಲಕ್ನ ರೂಪಲಿ ಮೊಡ್ಪಾಲೆಗೆ ಲಾಯಿಕ್ನ ಸುರ್ಪೊ ಬಾದು. ಹಿಂಗೆ ತಯಾರ್ ಮಾಡಿಕೆ ಏನೂ ಕರ್ಚಿಲ್ಲೆ.

ಕ್ರಸಿಕರ್ ತೋಟಲಿ, ಗುಡ್ಡೆಲಿ, ಗದ್ದೆಲಿ ಕೆಲ್ಸ ಮಾಡ್ಡನ ತಲೆಗೆ ಬಿಸ್ಲ್ ತಾಂಗದಂಗೆ, ಹಂಗೆನೆ ಮಳೆ ಬಾಕನ ತಲೆಗೆನೀರ್ ಎಳಿಯದಾಂಗೆ ಇದ್ ಅವ್ಕೆ ರಕ್ಷಾಕವಚ ಅಗಿದ್ದದೆ. ಹಂಗೆನೆ ತೂಕದ ಹೊರೆ ಹೊರ್ಕನ, ಗೊಬ್ಬರ ಹೊರ್ಕನ ತಲೆ ಒತ್ತದಂಗೆ ಇದರ ಇಸ್ವೆ. ಒಟ್ಟಾರೆ ಇದ್ ತಲೆಗೆ ಇಸ್ವ ಕಮ್ಮುನ ಹಾಳೆನ ಹೊದಿಕೆ. ತಲೆಗೆ ಕಟ್ಟುವ ಮುಂಡಾಸ್ ನಂಗೆ ಇದ್ದದೆ, ಇದರ ತುಳುಲಿ ತರೆತ್ರಂತೇಳಿ ಕರ್ದವೆ.

ಮೊಡ್ಪಾಲೆ ಇಸಿರೆ ಕೆಲ್ಸದವುಂತ ಗುರ್ತೊ ಅದೆ. ಬೇಸಾಯ ಮತ್ತೆ ಸಂಸ್ಕ್ರುತಿನ ಸಂಕೇತನೂ ಆದೆ. ಮಲೆನಾಡ್ನ ಜನಗ ಕಾಡ್ಲಿ ಹೋಕನ ತಲೆಗೆ ಅಡರ್, ಬೊಳ್ಳಿ ತಾಂಗದಂಗೆ, ಮುಳ್ಳು ಪರಂಕದಂಗೆ, ಕ್ರಿಮಿಕೀಟಗ, ಹಾವುಗ ತಲೆಗೆ ಬೀಳದಂಗೆ ಜಾಗ್ರತೆಗೆ ಇಸ್ವೆ. ಮೊಡ್ಪಾಳೆನ ಒಳಗೆ ಮೊಡ್ಚಿದ ಸಣ್ಣ ಸೆರೆ ಇದ್ದದೆ ಅದರಲ್ಲಿ ಕೆಬಿಗೆ ಹಾಕುವ ಕೋಳಿ ಸುವಿ, ದುಡ್ಡುನು ಇಸಿಕಂಡ್ ಜನಪದರ್ ಹೋದವೆ.

ಮೊಡ್ಪಾಳೆ ತಲೆಗೆ ಇಸುಕಂಬೊದರ್ಲಿ ಕೆಲವು ನಿಷೇಧಗ ಉಟ್ಟು. ಅಂದರೆ ಕೆಲವು ಸಮಯ, ಕೆಲವರ್ ಇಸಿಕೆ ಅಗದ್ ಅಂತ, ಅಂತವರ್ಲಿ ದೆವ್ವದ ಚಾಕರಿ ಮಾಡ್ವ ಪೂಜಾರಿಗ, ದೆವ್ವಕಟ್ಟಂವ, ಮೊಡ್ಯೊಳ, ಸೂಟೆ ಹಿಡೆಂವ (ಕಾಪಡ)ಮೊಡ್ಪಾಳೆ ಇಸಿಕೆ ಬೊತ್ತುಂತ ಸಾಮಾಜಿಕ ಕಟ್ಟಲೆ ಉಟ್ಟು.

ಮೊಡ್ಪಾಲೆ ಬರೇ ತಲೆರಕ್ಷಣೆಗೆಂತ ಬಳ್ಸದೆ ಅರಾದನೆಲಿ ಕೊರಗ ತನಿಯ ದೆವ್ವದ ಮುಕ್ಯ ವೇಸಲಿ ಮುಟ್ಟಾಲೆ (ಗೋಂಪರ್) ಇಸ್ವೆ. ಅದ್ ಬೇರೆ ದೆವ್ವಕ್ಕೂ ಇರ್ವ ತಲೆಪಟ್ಟಿ / ಮುಡಿ / ಅಣಿಯಂಗೆ ಕೊರಗ ತನಿಯಂಗೆ ಮೊಟ್ಪಾಳೆ ವಿಸೇಸ ತಲೆಪಟ್ಟಿ. ಈಚೇಗೆ ಸರಕಾರದಿಂದ ನಿಷೇಧಿಸಿದ ಮಾರ್ನೆಮಿ ಅಕನ ಕುಣ್ಕಂಡ್ ಬರ್ವ ಪೊರ್ಲುನ ಕೊರಗ ವೇಸಲಿನೂ ಕೊರಗ ಮುಟ್ಟಾಳೆ ಹಾಕಿಕಂಡ್ ಬಂದವೆ. ಹಿಂದೆ ನನ್ನ ಅವ್ವ ಹೇಳ್ದಂಗೆ ಮುದೆಲ್ (ಪರಿಶಿಷ್ಟ) ಜಾತಿಯವುಕ್ಕೆ

ಏನಾರ್ ಕೊಡ್ದಿದ್ದರೆ ಅವರ ಮೊಡ್ಪಾಳೆಗೆ ಹಾಕುತಿದ್ದೊ. ಇದರಲ್ಲಿ ಎಲೆಅಡಿಕೆ, ದುಡ್ಡು ಮತ್ತೆ ಬೇರೆ ಏನಾರು ಇದ್ದದೆ.

ಮುಂಡಾಸ್ನಂವ ಬಾದ್ಲೆ, ಮೊಡ್ಪಳೆಯವಂಗೆ ಕೊಡ್ಲೆಂತ ಒಂದು ಗಾದೆ ಉಟ್ಟು. ಮುಂಡಾಸ್ ಸಿರಿವಂತಿಕೆ / ಯಜಮಾನಿಕೆನ ಒಂದ್ ಸಂಕೇತ. ಒಳ್ಳೆ ಶುಭಕಾರ್ಯ ಇರಿಕನ ತಲೆಗೆ ಮುಂಡಾಸ್ ಕಟ್ಟುದ್ ಒಂದ್ ಕ್ರಮ. ಕಟ್ಟಿಕೆ ಗೊತ್ತಿಲ್ಲರೆ ಬೇರೆವರೊಟ್ಟಿಗಾರ್ ಕಟ್ಟಿಸಕ್. ಇಲ್ಲರೆ ಒಂದ್ ಬೈರಾಸ್ನ ಆದರೂ ತಲೆಗೆ ಹಾಕಿಕನಕ್. ಅದೂ ಇಲ್ಲರೆ ಟುವಾಲ್ ಹಾಕಿಕಂಡರೆ ಸುಧಾರಣೆ ಮಾಡಕ್. ತಲೆಗೆ ಮುಂಡಾಸ್ ಕಟ್ಟುವ ಕ್ರಮ ನಮ್ಮ ಊರ್ಲಿ ಮಾತ್ರ ಅಲ್ಲ ಇಡೀ ದೇಶಲಿ ಬೇರೆ ಬೇರೆ ಜನಾಂಗಲಿನೂ ಉಟ್ಟು. ಹಿಂಗಾಗಿ ಮೊಡ್ಪಾಲೆ / ಮುಂಡಾಸ್ ತಲೆಗೆ ಕೊಡುವ ಮರ್ಯಾದಿ ಆಗಿದ್ದದೆ. ಈ ಗಾದೆ ಅಸ್ತಿ ಜಮ್ಮ ಇದ್ದವ ಬಾದುಲೆ ಅಂದರೆ ನಮ್ಮ ಕೂಸು ಅಷ್ಟು ಲಾಯಿಕಿಲ್ಲೆನೊ ಎನೊ ಹಂಗೆನೆ ಸಾಧಾರಣ ಸ್ತಿತಿಯವಂಗೆ ಕೊಡಿಕೆ ಮನಸ್ಸಿಲ್ಲೆ ಹಿಂಗೆ ಗೂಡೆ ಬಾಕಿ ಅದೆನೊ ಅಂತ ಜನ ಗಾದೆ ರೂಪಲಿ ಮಾತಾಡ್ವೆ, ಮೊಡ್ಪಾಲೆ ಇಸಿಕೆ ಮನ್ಸಿಲ್ಲೆ, ಮುಂಡಾಸ್ ಕಟ್ಟಿಕ್ಕೆ ತಾಕತ್ತಿಲ್ಲೆ. ಅಂದರೆ ಅಂತಹ ದುಡ್ಡಿನ ಅಂತಸ್ತಿನವೂ ಅಲ್ಲ, ಅದರೂ ಇಲ್ಲದರ ಹಂಗೆ ಬದುಕಿಕೆ ಅದ್ಲೆ. ಒಟ್ಟಾಗಿ, ಮೊಡ್ಪಾಳೆ ನಮ್ಮ ಸಾಮಾಜಿಕ, ಸಾಂಸ್ಕೃತಿಕ ರಾ0ಯಬಾರಿ ಅಂತ ಹೇಳಿರೆ ತಪ್ಪಾಕಿಲ್ಲೆ.

ಮೊಡ್ಪಾಳೆಂತ ಹೇಳ್ರೆ ಕಮ್ಮುನ ಹಾಳೆಲಿ ಮಾಡ್ವ ಟೊಪ್ಪಿ. ಇದರ ಮೊಟ್ಪಾಳೆ, ಮಡ್ಪಳೆ, ಕೊಟ್ಪಾಳೆ ಅಂತ ಅರೆಬಾಸೆಲಿ ಕರ್ದವೆ. ಮುಟ್ಪಾಲೆ, ಮುಟ್ಟಪಾಲೆ, ಮುಟ್ಟಂಬಾಲೆಂತ ತುಳುಲಿ ಹೇಳ್ವೆ, ಮಲೆನಾಡ್ಲಿ ಇದರ ಹಾಳೆಕೊಟ್ಟೆಂತೇಳಿ ಕರ್ದವೆ. ಮಂಡೆಹಾಳೆ ಅಂತ ಉಡುಪಿ ಕಡೆ ಹೇಳ್ವೆ. ಇದರ ಇಂಗ್ಲಿಸ್ಲಿ ಅರೆಕಾ ಲೀಫ್ ಹ್ಯಾಟ್‌ಂತ ಹೇಳ್ವೆ. ಮೊಡ್ಪಾಳೆಲಿ ಹಲವು ವಿದಗ ಉಟ್ಟು. ಅಡ್ಡಮೊಡ್ಪಾಳೆ ಅಡ್ಡವಾಗಿ ದರಿಸುವ ಹಾಳೆಯ ಟೊಪ್ಪಿ, ಗೋಂಪರ್ಮೊಡ್ಪಾಳೆ ದೊಡ್ಡ ಇರುವ ಮೊಡ್ಪಾಳೆ, ಕಣ್ಣಿಮೊಡ್ಪಾಳೆ ಈಂದ್ನ ಬೊಳ್ಳಿನ ಹೆಣ್ದ್ ಅಲಂಕಾರ ಮಾಡ್ದ ಮೊಡ್ಪಾಳೆ, ಕೊಂಬುಮೊಡ್ಪಾಳೆ ಇದ್ ವಿಸೇಸಾಗಿ ಒಂದ್ ಪಕ್ಕ ಚೂಪು ತುದಿ ಇರ್ವ ಮೊಡ್ಪಾಳೆ, ನೆರಿಮೊಡ್ಪಾಳೆ ಇದು ನೆರಿಗೆ ಇರ್ವ ಮೊಡ್ಪಾಳೆ

ಇದ್ ನೋಡಿಕೆ ಮೊಟ್ಟೆಯಾಕಾರ ಅಗಿ ಇದ್ದದೆ. ಮೊಡ್ಪಾಲೆಗೆ ಕಡೆ ಕೊಡಿಂತ ಉಟ್ಟು. ಕೊಡಿ ಬಾಗ ಕೊಟ್ಟುನ ಆಕಾರ ತಲೆ ಮುಂಡ ಬಾಗಕ್ಕೂ ಕಡೆ ಬಾಗ ತಲೆ ಹಿಂಬಾಗಕ್ಕೂ ಇದ್ದದೆ. ಇನ್ನ್ ಮೊಡ್ಪಾಲೆನ ಎಡ ಪಕ್ಕ ಮತ್ತೆ ಬಲ ಪಕ್ಕ ಹಾಲೆನ ಮಡ್ಚಿ ಕಟ್ಟುವೆ. ಎರಡು ಪಕ್ಕಲಿ ಹಾಳೆನ ಮಡ್ಚಿದ ನೆರಿಗೆಗ ಇದ್ದ್ ಮೊಡ್ಪಾಳೆಗೆ ಒಂದ್ ಪೊರ್ಲುನ ರೂಪೊ ಕೊಟ್ಟವೆ.

ಮೊಡ್ಪಾಳೆಂತ ಹೇಳ್ವ ಹೆಸ್ರ್ ಬಾರಿ ಪೊರ್ಲು ಉಟ್ಟು. ಮೊಟ್+ಪಾಲೆ ಹಿಂಗೆ ವಿಂಗಡಿಸಕ್. ಅದರೆ ಮೊಟ್, ಮೊಟ್ಟೆ ಅಂತ ವಿಸೇಸ ಅರ್ತ ಕೊಡುವ ಸಬ್ದ ನಮ್ಮ ಅರೆಬಾಸೆಲಿ ಇಲ್ಲೆ. ಇದ್ ತುಳು ಸಬ್ದದ ಮುಟ್ಪಾಳೆಯಿಂದ ಬಂದಿರ್ದು. ತುಳುಲಿ ಮುಟ್ಟೆ ಅಂದರೆ ತಲೆ ಎಂಬ ಅರ್ತ ಉಟ್ಟು. ಮೀನುತ ಮುಟ್ಟೆ

(ಮೀನ್ನ ತಲೆ), ಉಚ್ಚುತ ಮುಟ್ಟೆ (ಹಾವ್ನ ತಲೆ), ಯಾರಾದರೂ ದೂರಂದ ಗದ್ದೆ ಪುಣಿಲಿ ಬಾಕನ ಕಂಡರೆ "ಎರ್ನವೊ ಮುಟ್ಟೆ ತೋಜುಂಡು, ಎರ್ಂದ್ ಗೊತ್ತಾಪುಜಿ" (ಯಾರ್ದೊ ತಲೆ ಕಂಡದೆ, ಯಾರ್ಂತ ಗೊತ್ತಾದ್ಲೆ) ಂತೇಳುವ ಮಾತ್ ಉಟ್ಟು. ಮುಟ್ಟಾಳೆ, ಮೊಟ್ಟಾಳೆ ಅಂತ ಅಪಬ್ರಂಸ ಆವುಟೇನೊ ಅಂತ ಊಹೆ ಅಷ್ಟೆ. ಹಂಗೆನೆ ಮೊಡ್ಡ+ಪಾಲೆ ಅಂದ್ರೆ ಹಾಲೆನ ಮೊಡ್ದ್ ಮಾಡ್ದರನ್ದ ಮೊಡ್ಪಾಲೆ ಅಗಿರ್ದು. ಅದರೆ ಈ ಪದನ ನಾಮಪದದ ನೆಲೆಲಿ ನೋಡಿರೆ ಮೊಡ್ಪಾಲೆ ಕ್ರಿಯಾಪದ ಅಗಿ ಬಾಕೆ ಇಲ್ಲೆಂತ ಕಂಡದೆ. ಇದರ ರೂಪ ನೋಡಿಕನ ಮೊಟ್ಟೆನಂಗೆ ಕಾಣ್ವ ಕಾರಣ ರೂಪಂದ ಹೆಸರ್ ಬಾತ್ಂತ ಅನ್ಸಿದೆ.

ಮೊಡ್ಪಾಲೆನ ನಲಿಕೆ ಜನಾಂಗದವು ಮೊಡ್ದವೆ. ದ್ವೆವದ ಕೋಲ ಕಟ್ಟುವ ನಲಿಕೆ ಜನಾಂಗವ್ರ ಕೆಲ್ಸ ಪತ್ತನಾಜೆ ಮುಗ್ದದೆ. ಆಮೇಲೆ ಮಳೆಗಾಲಲಿ ಮೊಡ್ಪಾಳೆನ ಹೆಣೆವ ಕೆಲ್ಸ ಮಾಡ್ವೆ. ಹಾಳೆಗಳ್ಲಿ ಮರ್ಪಾಲೆ, ನೆಯಿಪಾಲೆಂತ ವಿದ ಉಟ್ಟು. ಮರ್ಪಾಲೆ ಸೆಗಣಿ ಕೆರೆಕನ ಬಳಸ್ವೆ. ಮರ್ಪಾಲೆ ಗಟ್ಟಿಯಾಗಿ ಇದ್ದದೆ. ಬಗ್ಗಿಸ್ಕನ ಬಗ್ಗುದ್ಲೆ. ಅದರ ಮರಕೆಡ್ಡಿಂತೇಳ್ವೆ. ಮೊಡ್ಪಾಳೆಗೆ ನೆಯಿಪಾಲೆ ಲಾಯ್ಕ್, ಇದ್ ಮೆತ್ತಂಗೆ ಅಗಿ ಲಾಯಿಕಿಲಿ ಬಗ್ಗಿಸಿಕೆ ಆದೆ. ಅದರ ಎರಡ್ ಪಕ್ಕ ತಲೆ ಅಳತೆ ಹಿಡಿವಸ್ಟ್ ಕೊಯ್ದ್ ನೆರಿ ಬರುವಂಗೆ ಮಾಡೊಕ್. ಕೊಡಿನ ಮೊಡ್ಚಿ ಕೊಟ್ಟು ಬರುವಂಗೆ ಮಾಡಿ ಬೊಳ್ಳಿ ಕಟ್ಟೊಕ್. ಈ ಬೊಳ್ಳಿ ಈಂದ್ ಮರದ ಕಣ್ಣಿ ಬೊಳ್ಳಿ ಇಲ್ಲರೆ ದಡ್ಪಾಲೆ ಮರದ ಜೋಂಕು ಬೊಳ್ಳಿನ ಸೂಜಿಲಿ ಹಾಕಿ ನೆಯ್ದವೆ. ಇದರ ನೆಯ್ಯಕೆ ಲಾಯಿಕ್ನ ಕೆಣಿ ಬೇಕ್. ನೆಯ್ಯವನ ಕೈ ಚಾಲಕ್ನ ರೂಪಲಿ ಮೊಡ್ಪಾಲೆಗೆ ಲಾಯಿಕ್ನ ಸುರ್ಪೊ ಬಾದು. ಹಿಂಗೆ ತಯಾರ್ ಮಾಡಿಕೆ ಏನೂ ಕರ್ಚಿಲ್ಲೆ.

ಕ್ರಸಿಕರ್ ತೋಟಲಿ, ಗುಡ್ಡೆಲಿ, ಗದ್ದೆಲಿ ಕೆಲ್ಸ ಮಾಡ್ಕನ ತಲೆಗೆ ಬಿಸ್ಲ್ ತಾಂಗದಂಗೆ, ಹಂಗೆನೆ ಮಳೆ ಬಾಕನ ತಲೆಗೆನೀರ್ ಎಳಿಯದಾಂಗೆ ಇದ್ ಅವ್ಕೆ ರಕ್ಷಾಕವಚ ಅಗಿದ್ದದೆ. ಹಂಗೆನೆ ತೂಕದ ಹೊರೆ ಹೊರ್ಕನ, ಗೊಬ್ಬರ ಹೊರ್ಕನ ತಲೆ ಒತ್ತದಂಗೆ ಇದರ ಇಸ್ವೆ. ಒಟ್ಟಾರೆ ಇದ್ ತಲೆಗೆ ಇಸ್ವ ಕಮ್ಮುನ ಹಾಳೆನ ಹೊದಿಕೆ. ತಲೆಗೆ ಕಟ್ಟುವ ಮುಂಡಾಸ್ ನಂಗೆ ಇದ್ದದೆ, ಇದರ ತುಳುಲಿ ತರೆತ್ರಂತೇಳಿ ಕರ್ದವೆ. ಮೊಡ್ಪಾಲೆ ಇಸಿರೆ ಕೆಲ್ಸದವುಂತ ಗುರ್ತೊ ಅದೆ. ಬೇಸಾಯ ಮತ್ತೆ ಸಂಸ್ಕೃತಿನ ಸಂಕೇತನೂ ಆದೆ. ಮಲೆನಾಡ್ನ ಜನಗ ಕಾಡ್ಲಿ ಹೋಕನ ತಲೆಗೆ ಅಡರ್, ಬೊಳ್ಳಿ ತಾಂಗದಂಗೆ, ಮುಳ್ಳು ಪರಂಕದಂಗೆ, ಕ್ರಿಮಿಕೀಟಗ, ಹಾವುಗ ತಲೆಗೆ ಬೀಳದಂಗೆ ಜಾಗ್ರತೆಗೆ ಇಸ್ವೆ. ಮೊಡ್ಪಾಳೆನ ಒಳಗೆ ಮೊಡ್ಚಿದ ಸಣ್ಣ ಸೆರೆ ಇದ್ದದೆ ಅದರಲ್ಲಿ ಕೆಬಿಗೆ ಹಾಕುವ ಕೋಳಿ ಸುವಿ, ದುಡ್ಡುನು ಇಸಿಕಂಡ್ ಜನಪದರ್ ಹೋದವೆ.

ಮೊಡ್ಪಾಳೆ ತಲೆಗೆ ಇಸುಕಂಬೊದರ್ಲಿ ಕೆಲವು ನಿಷೇಧಗ ಉಟ್ಟು. ಅಂದರೆ ಕೆಲವು ಸಮಯ, ಕೆಲವರ್ ಇಸಿಕೆ ಅಗದ್ ಅಂತ, ಅಂತವರ್ಲಿ ದೆವ್ವದ ಚಾಕರಿ ಮಾಡ್ವ ಪೂಜಾರಿಗ, ದೆವ್ವಕಟ್ಟಂವ, ಮೊಡ್ಯೊಳ, ಸೂಟೆ ಹಿಡೆಂವ (ಕಾಪಡ)

ಮೊಡ್ಪಾಳೆ ಇಸಿಕೆ ಬೊತ್ತುಂತ ಸಾಮಾಜಿಕ ಕಟ್ಟಲೆ ಉಟ್ಟು.

ಮೊಡ್ಪಾಲೆ ಬರೇ ತಲೆರಕ್ಷಣೆಗೆಂತ ಬಳ್ಸದೆ ಅರಾದನೆಲಿ ಕೊರಗ ತನಿಯ ದೆವ್ವದ ಮುಕ್ಯ ವೇಸಲಿ ಮುಟ್ಪಾಲೆ (ಗೋಂಪರ್) ಇಸ್ವೆ. ಅದ್ ಬೇರೆ ದೆವ್ವಕ್ಕೂ ಇರ್ವ ತಲೆಪಟ್ಟಿ / ಮುಡಿ / ಅಣಿಯಂಗೆ ಕೊರಗ ತನಿಯಂಗೆ ಮೊಟ್ಪಾಳೆ ವಿಸೇಸ ತಲೆಪಟ್ಟಿ. ಈಚೇಗೆ ಸರಕಾರದಿಂದ ನಿಷೇಧಿಸಿದ ಮಾರ್ನೆಮಿ ಅಕನ ಕುಣ್ಕಂಡ್ ಬರ್ವ ಪೊರ್ಲುನ ಕೊರಗ ವೇಸಲಿನೂ ಕೊರಗ ಮುಟ್ಪಾಳೆ ಹಾಕಿಕಂಡ್ ಬಂದವೆ. ಹಿಂದೆ ನನ್ನ ಅವ್ವ ಹೇಳ್ದಂಗೆ ಮುದೆಲ್ (ಪರಿಶಿಷ್ಟ) ಜಾತಿಯವುಕ್ಕೆ ಏನಾರ್ ಕೊಡ್ದಿದ್ದರೆ ಅವರ ಮೊಡ್ಪಾಳೆಗೆ ಹಾಕುತಿದ್ದೊ. ಇದರಲ್ಲಿ ಎಲೆಅಡಿಕೆ, ದುಡ್ಡು ಮತ್ತೆ ಬೇರೆ ಏನಾರು ಇದ್ದದೆ.

ಮುಂಡಾಸ್ನಂವ ಬಾದ್ಲೆ, ಮೊಡ್ಪಳೆಯವಂಗೆ ಕೊಡ್ದ್ಲೊಂತ ಒಂದು ಗಾದೆ ಉಟ್ಟು. ಮುಂಡಾಸ್ ಸಿರಿವಂತಿಕೆ / ಯಜಮಾನಿಕೆನ ಒಂದ್ ಸಂಕೇತ. ಒಳ್ಳೆ ಶುಭಕಾರ್ಯ ಇರಿಕನ ತಲೆಗೆ ಮುಂಡಾಸ್ ಕಟ್ಟುದ್ ಒಂದ್ ಕ್ರಮ. ಕಟ್ಟಿಕೆ ಗೊತ್ತಿಲ್ಲರೆ ಬೇರೆವರೊಟ್ಟಿಗಾರ್ ಕಟ್ಟಿಸಕ್. ಇಲ್ಲರೆ ಒಂದ್ ಬೈರಾಸ್ನ ಆದರೂ ತಲೆಗೆ ಹಾಕಿಕನಕ್. ಅದೂ ಇಲ್ಲರೆ ಟುವಾಲ್ ಹಾಕಿಕಂಡರೆ ಸುಧಾರಣೆ ಮಾಡಕ್. ತಲೆಗೆ ಮುಂಡಾಸ್ ಕಟ್ಟುವ ಕ್ರಮ ನಮ್ಮ ಊರ್ಲಿ ಮಾತ್ರ ಅಲ್ಲ ಇಡೀ ದೇಶಲಿ ಬೇರೆ ಬೇರೆ ಜನಾಂಗಲಿನೂ ಉಟ್ಟು. ಹಿಂಗಾಗಿ ಮೊಡ್ಪಾಲೆ / ಮುಂಡಾಸ್ ತಲೆಗೆ ಕೊಡುವ ಮರ್ಯಾದಿ ಆಗಿದ್ದದೆ. ಈ ಗಾದೆ ಅಸ್ತಿ ಜಮ್ಮ ಇದ್ದವ ಬಾದುಲೆ ಅಂದರೆ ನಮ್ಮ ಕೂಸು ಅಷ್ಟು ಲಾಯಿಕಿಲ್ಲೆನೊ ಎನೊ ಹಂಗೆನೆ ಸಾಧಾರಣ ಸ್ತಿತಿಯವಂಗೆ ಕೊಡಿಕೆ ಮನಸ್ಸಿಲ್ಲೆ ಹಿಂಗೆ ಗೂಡೆ ಬಾಕಿ ಅದೆನೊ ಅಂತ ಜನ ಗಾದೆ ರೂಪಲಿ ಮಾತಾಡ್ವೆ. ಮೊಡ್ಪಾಲೆ ಇಸಿಕೆ ಮನ್ನಿಲ್ಲೆ, ಮುಂಡಾಸ್ ಕಟ್ಟಿಕ್ಕೆ ತಾಕತ್ತಿಲ್ಲೆ. ಅಂದರೆ ಅಂತಹ ದುಡ್ಡಿನ ಅಂತಸ್ತಿನವೂ ಅಲ್ಲ, ಅದರೂ ಇಲ್ಲದರ ಹಂಗೆ ಬದುಕಿಕೆ ಅದ್ಲೆ. ಒಟ್ಟಾಗಿ, ಮೊಡ್ಪಾಳೆ ನಮ್ಮ ಸಾಮಾಜಿಕ, ಸಾಂಸ್ಕೃತಿಕ ರಾಯಬಾರಿ ಅಂತ ಹೇಳಿರೆ ತಪ್ಪಾಕಿಲ್ಲೆ.

✍ ಭರತೇಶ್ ಅಲಸಂಡೆಮಜಲು

## "ಹಿಂಗಾರ" ಚಂದಾದಾರರ ತಿಳಿವಳಿಕೆಗೆ

ಕರ್ನಾಟಕ ಅರೆಬಾಸೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ಕಡೆಂದ ಪ್ರಕಟ ಆಗ್‌ವ 'ಹಿಂಗಾರ' ಪತ್ರಿಕೆನ ಎಲ್ಲವು ತುಂಬ ಅಭಿಮಾನಂದ ತಕಂಡ್ ಪ್ರೋತ್ಸಾಹಿಸೊಕು. ನೀವೆಲ್ಲವು ಅದರ ಸದಸ್ಯತ್ವ ಪಡ್‌ಕಣೊಕು. ಅದರ ತ್ರೈವಾರ್ಷಿಕ ಚಂದಾ ದರ ರೂ. 200.00 ಆಗುಟು. ಬಿಡಿ ಪತ್ರಿಕೆಗೆ ರೂ. 20.00. ಸದಸ್ಯರಾದವುಕೆ ಪತ್ರಿಕೆನ ಅಂಚೆಲಿ ಕಳ್ಸಿವೆ. ನಿಮ್ಮ ಪರಿಚಯಿಸ್ತರಿಗೆ ಸದಸ್ಯರ್ ಆಕೆ ದಯಮಾಡಿ ಹೇಳಿ. ಆಜೀವ ಸದಸ್ಯತ್ವಕ್ಕೆ ರೂ. 600.00

# 2020ರ ಜನವರಿಂದ ಮಾರ್ಚ್ ಕೊನೆಗೆಮುಟ್ಟ ಅಕಾಡೆಮಿ ಹಮ್ಮಿಕಂಡಿದ್ದ ಕಾರ್ಯಕ್ರಮಗ:

1. 2020ರ ಫೆಬ್ರವರಿ 1ರಂದ್ ಕೊಡಗು ಜಿಲ್ಲಾ 14ನೇ ಕನ್ನಡ ಸಾಹಿತ್ಯ ಸಮ್ಮೇಳನಲಿ ಶ್ವೇತಕುಮಾರಿಯವರ ತಂಡಂದ ಅರೆಬಾಸೆ ಜನಪದ ಕೋಲಾಟ ಕಾರ್ಯಕ್ರಮನ ನೀಡಿದೊ.
2. 2020ರ ಫೆಬ್ರವರಿ 3ರಂದ್ ರಂಗಮನೆ ಸಾಂಸ್ಕೃತಿಕ ಕಲಾಕೇಂದ್ರ ಹಳೆಗೇಟು, ಸುಳ್ಯ ಇಲ್ಲಿ "ಅರೆಭಾಷೆ ರಂಗ ತರಬೇತಿ ಶಿಬಿರ" ದ ಉದ್ಘಾಟನಾ ಜಂಬರನ ಏರ್ಪಡಿಸಿದೊ. ಇದರ್ಲಿ ಶ್ರೀ ತುಕರಾಂ ಏನೆಕಲ್ಲು, ಹಿರಿಯ ರಂಗಕರ್ಮಿ ಇವು ಶಿಬಿರದ ಉದ್ಘಾಟನೆ ಮಾಡಿದೊ. ಶ್ರೀ ಜೀವನ್ ರಾಂ, ಸುಳ್ಯ ಇವರ ನಿರ್ದೇಶನಲಿ ತರಬೇತಿ ನೀಡಿದೊ,ಇದ್ರಲಿ 15 ಜನ ಕಲಾವಿದರ್ ಶಿಬಿರಲಿ ಭಾಗವಹಿಸಿದೊ.
3. 2020ರ ಫೆಬ್ರವರಿ 6 ರಂದ್ ದಕ್ಷಿಣ ಕನ್ನಡ ಜಿಲ್ಲೆನ ಕುಕ್ಕೆಶ್ರೀ ಸುಬ್ರಹ್ಮಣ್ಯೇಶ್ವರ ಮಹಾವಿದ್ಯಾಲಯ ಸುಬ್ರಹ್ಮಣ್ಯಲಿ "ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಸಂಘ" ರಚನೆ ಮಾಡಲಾತ್.
4. 2020ರ ಫೆಬ್ರವರಿ 8 ರಂದ್ ಕೊಡಗು ಜಿಲ್ಲೆನ ಅವಂದೂರು ಗ್ರಾಮಲಿ "ಅರೆಭಾಷೆ ಸಂಸ್ಕೃತಿಲಿ ಕಿಡ್ಡಾಸ ಹಬ್ಬ" ಕಾರ್ಯಕ್ರಮನ ಆಯೋಜಿಸಲಾಗಿತ್ತ್ ಶ್ರೀ ಕೊಂಬಾರನ ಬೋಪಯ್ಯ, ಸನ್ಮಾನ್ಯ ವಿಧಾನಸಭಾ ಸದಸ್ಯರ್ ಕಾರ್ಯಕ್ರಮನ ಉದ್ಘಾಟಿಸಿದೊ. ಕಾರ್ಯಕ್ರಮಲಿ ಕಲಾವಿದರಿಗೆ ಅರೆಭಾಷೆ ಜನಪದ ಕೋಲಾಟದ ಉಡುಪು ಮತ್ತೆ ಸಾಂಸ್ಕೃತಿಕ ಪರಿಕರಗಳ ವಿತರಣೆ ಮಾಡಲಾತ್. ಕಾರ್ಯಕ್ರಮಲಿ ವಸ್ತು ಪ್ರದರ್ಶನ ಏರ್ಪಡಿಸಲಾಗಿತ್ತ್. ಅವಂದೂರು ಗ್ರಾಮದ ಕಲಾವಿದರ್‌ಂದ ಹಲವಾರು ಸಾಂಸ್ಕೃತಿಕ ಕಾರ್ಯಕ್ರಮಗ ಜರುಗಿದೊ.
5. 2020 ರ ಫೆಬ್ರವರಿ 9ರಂದು ತೋಟಗಾರಿಕಾ ಇಲಾಖೆನ ವತಿಂದ ರಾಜಾಸೀಟ್ ಉದ್ಯಾನವನಲಿ ಆಯೋಜಿಸಿದ್ದ "ಫಲಪುಷ್ಪ ಪ್ರದರ್ಶನ" ಕಾರ್ಯಕ್ರಮಲಿ ಶ್ರೀ ಲೋಕೇಶ್ ಊರುಬೈಲು, ಶ್ವೇತಾ ಕುಮಾರಿ ಯು.ಪಿ, ರೀತಾ ಯು.ಸಿ ಮತ್ತು ಕೊಡಗು ಗೌಡ ಯುವ ವೇದಿಕೆ ಮಡಿಕೇರಿ ಇವು ಅಕಾಡೆಮಿನ ವತಿಂದ ಸಾಂಸ್ಕೃತಿಕ ಕಾರ್ಯಕ್ರಮಗಳ್‌ನ್ನ ನಡ್‌ಸಿಕೊಟ್ಟೊ.
6. 2020 ಫೆಬ್ರವರಿ 14ರ್‌ಂದ 19ರ ಮುಟ್‌ಟ ರಂಗಾಯಣ, ಮೈಸೂರು ಇವು ಏರ್ಪಡಿಸಿದ್ದ ಬಹುರೂಪಿ ನಾಟಕೋತ್ಸವಲಿ ದಿನಾಂಕ 17.02.2020 ರಂದ್ ಶ್ರೀ ದಾಮೋದರ ಎ.ಪಿ ಇವು "ಸಿದ್ದವೇಷ" ಮತ್ತೆ ಅಭಿನಯ ಕಲಾ

ಮಿಲನ ಚಾರಿಟೆಬಲ್ ಟ್ರಸ್ಟ್ ಇವು ಜಾನಪದ ನೃತ್ಯ ಕಾರ್ಯಕ್ರಮನ ಅಕಾಡೆಮಿ ವತಿಂದ ನೀಡ್‌ದೊ.

7. 2020 ಫೆಬ್ರವರಿ 16 ರಂದ್ ಚೆಂಬು ಗ್ರಾಮಲ್ಲಿ "ಅರೆಭಾಷೆ ಸಿರಿ ಸಂಸ್ಕೃತಿ ಮತ್ತು ಕೆಡ್ಡಾಸ ಗೌಜಿ" ಕಾರ್ಯಕ್ರಮನ ಆಯೋಜಿಸಲಾಗಿತ್ತ್, ಶ್ರೀಮತಿ ತೆಕ್ಕಡೆ ಶೋಭಾ ಮೋಹನ್, ಅಧ್ಯಕ್ಷರು, ತಾಲೂಕು ಪಂಚಾಯತ್, ಮಡಿಕೇರಿ ಇವು ಕಾರ್ಯಕ್ರಮನ ಉದ್ಘಾಟಿಸಿದೊ. ಕಾರ್ಯಕ್ರಮಲಿ ಶ್ರೀ ಜಬ್ಬಾರ್ ಸಮೊ ಸಂಪಾಜೆ ಇವು ಅರೆಭಾಷೆಲಿ ಯಕ್ಷಗಾನ ತಾಳಮದ್ದಳೆ ನಡೆಸಿಕೊಟ್ಟೊ ಹಾಂಗೆ ಜನಪದರ ಬೊದ್ಕುಲಿ ಕೆಡ್ಡಾಸ ಹಬ್ಬ, ಅರೆಭಾಷಾ ಸಂಸ್ಕೃತಿಲಿ ಮನೆ ಒಕ್ಕುಲು ಜಂಬರ ಅರೆಭಾಷಾ ಸಂಸ್ಕೃತಿಲಿ ಕೂಸ್‌ನ ತೊಟ್ಟಿಗಿಲ್ ಹಾಕುವ ಕ್ರಮ ಅರೆಭಾಷಾ ಸಂಸ್ಕೃತಿಲಿ ಮೊದುವೆ ಜಂಬರ, ಅರೆಭಾಷೆ ಸಂಸ್ಕೃತಿಲಿ ಬೊಜ್ಜದ ಕ್ರಮಗಳ ಬಗ್ಗೆ ಪ್ರಾತ್ಯಕ್ಷಿಕೆ ನಡ್ತ್.

8. 2020 ಫೆಬ್ರವರಿ 23 ರಂದ್ ಕೊಡಗು ಜಿಲ್ಲೆಯ ಸೋಮವಾರಪೇಟೆ ತಾಲೂಕ್‌ನ ಆಲೂರು ಸಿದ್ದಾಪುರ ಗ್ರಾಮಲಿ "2ನೇ ಅರೆಭಾಷೆ ಸಾಹಿತ್ಯ ಸಮ್ಮೇಳನ–2020" ಕಾರ್ಯಕ್ರಮನ ಆಯೋಜಿಸಲಾತ್. ಕಾರ್ಯಕ್ರಮಲ್ಲಿ ಸಾಂಸ್ಕೃತಿಕ ಮೆರವಣಿಗೆ, ರಾಷ್ಟ್ರ ಧ್ವಜಾರೋಹಣ, ವಸ್ತು ಪ್ರದರ್ಶನ, ಪುಸ್ತಕ ಪ್ರದರ್ಶನಗಳ್‌ನ ಏರ್ಪಡಿಸಲಾಗಿತ್ತ್. ಸಮ್ಮೇಳನದ ಅಧ್ಯಕ್ಷರಾಗಿ ಶ್ರೀ ಭವಾನಿಶಂಕರ ಹೊದ್ದೆಟ್ಟಿ, ಅರೆಭಾಷೆ ಸಾಹಿತಿಗ, ಬೆಂಗಳೂರು ಇವು ಭಾಗವಹಿಸಿದೊ. ಸನ್ಮಾನ್ಯ ಶ್ರೀ ಡಿ.ವಿ. ಸದಾನಂದಗೌಡ ಕೇಂದ್ರ ರಾಸಾಯನಿಕ ಮತ್ತು ರಸಗೊಬ್ಬರ ಖಾತೆ ಸಚಿವರ್, ಭಾರತ ಸರ್ಕಾರ ಇವು ಸಮ್ಮೇಳನದ ಉದ್ಘಾಟಕರಾಗಿ ಭಾಗವಹಿಸಿದೊ. ಮಡಿಕೇರಿ ವಿಧಾನಸಭಾ ಕ್ಷೇತ್ರದ ಶಾಸಕರ್ ಶ್ರೀ ಅಪ್ಪಚ್ಚುರಂಜನ್ ಇವು ಪುಸ್ತಕಗಳ ಬಿಡುಗಡೆ ಮಾಡ್ದೊ, ಶ್ರೀ ಕೊಂಬಾರನ ಬೋಪಯ್ಯ, ಶಾಸಕರು ವಿರಾಜಪೇಟೆ ಕ್ಷೇತ್ರ ಇವು ಸ್ಮರಣ ಸಂಚಿಕೆನ ಬಿಡುಗಡೆ ಮಾಡ್ದೊ. ಕಾರ್ಯಕ್ರಮಲಿ ಅರೆಭಾಷೆ ಸಾಹಿತ್ಯ ವಿಚಾರಗೋಷ್ಠಿ, ಅರೆಭಾಷೆ ಹಾಡ್‌ಗಳ ಗಾಯನ, ಅರೆಭಾಷೆ ಕವಿಗೋಷ್ಠಿಗಳ್‌ನ ಏರ್ಪಡಿಸಲಾಗಿತ್ತ್. ಅರೆಭಾಷೆ ಕ್ಷೇತ್ರಲಿ ದುಡ್‌ದ 8 ಜನಕ್ಕೆ ಸನ್ಮಾನ ಮಾಡಿದೊ. ಅಕಾಡೆಮಿಂದ ಪ್ರಕಟಾದ ಶ್ರೀಮತಿ ಎಂ.ಜಿ.ಕಾವೇರಮ್ಮ ಇವರ "ಪುಂಸ್ತ್ರೀ" (ಅರೆಭಾಷೆ ಕಾದಂಬರಿ), ಶ್ರೀಮತಿ ಸಂಗೀತ ರವಿರಾಜ್ ಇವರ "ಕಲ್ಯಾಣ ಸ್ವಾಮಿ" (ಅರೆಭಾಷೆ ಕಾದಂಬರಿ) ಮತ್ತು ಶ್ರೀಮತಿ ಕಟ್ರತನ ಲಲಿತಾ ಅಯ್ಯಣ್ಣ ಇವರ "ಅಪೂರ್ವ ಸಂಗಮ" (ಅರೆಭಾಷಾ ಕಥಾ ಸಂಕಲನ) ಪುಸ್ತಕಗಳ ಬಿಡುಗಡೆ ಮಾಡಲಾತ್. ಶ್ರೀ ಅಮ್ಮಾಜ್ಜೀರ ಪೊನ್ನಪ್ಪ ಇವು ನಾಟ್ಯ ರೂಪಕ ಮತ್ತೆ ಆಲೂರು ಸಿದ್ದಾಪುರ ಗೌಡ ಸಮಾಜದವು ಅರೆಭಾಷೆ ಸಾಂಸ್ಕೃತಿಕ ವೈವಿಧ್ಯ ಕಾರ್ಯಕ್ರಗಳ್‌ನ ನೀಡಿದೊ.

# ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಅಧ್ಯಕ್ಷರ ಮತ್ತು ಸದಸ್ಯರ ವಿಳಾಸ :

ಅಧ್ಯಕ್ಷರು

**ಶ್ರೀ ಲಕ್ಷ್ಮೀ ನಾರಾಯಣ**

ಕನಕಮಜಲು ಅಂಚೆ, ಸುಳ್ಯ ತಾಲೂಕು, ದ.ಕ 574223

ಮೊ ನಂ 9449082249, kajegadde@gmail.com

ಸದಸ್ಯರು

| | | |
|---|---|---|
| **ಶ್ರೀಮತಿ ಜಾನಕಿ ಬೈತಡ್ಕ** | : | #21–16. ರೇಸ್‌ಕೋರ್ಸ್ ರಸ್ತೆ,<br>ಎಲ್‌ಐಸಿ ಹತ್ತಿರ,ಮಡಿಕೇರಿ, ಕೊಡಗು.<br>ಮೊ ನಂ 9008571899 |
| **ಶ್ರೀಮತಿ ಸ್ಮಿತಾ ಅಮೃತರಾಜ್** | : | 'ಹಸಿರು' ಬಾಲೆಂಬಿ ಅಂಚೆ ಚೆಂಬು ಗ್ರಾಮ<br>ಮಡಿಕೇರಿ ತಾಲೂಕು<br>ಮೊ ನಂ 9980402968 |
| **ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ** | : | ಟಿ.ಜಾನ್ ಲೇಔಟ್, ಶಕ್ತಿ ಕ್ವಾಟ್ರಸ್,<br>ಮಡಿಕೇರಿ, ಮೊ.ನಂ 9900992360 |
| **ಶ್ರೀ ಎ.ಪಿ. ಧನಂಜಯ ಅಗೋಳಿಕಜೆ** | : | 2ನೇ ಮೊಣ್ಣಂಗೇರಿ ಗ್ರಾಮ<br>ಮದೆ ಅಂಚೆ, ಮಡಿಕೇರಿ ತಾಲೂಕು<br>ಮೊ ನಂ 9449731238 |
| **ಶ್ರೀ ಆನಂದ ದಂಬೆಕೋಡಿ** | : | ಮೇಘಸಂದ್ಯೆ ಎಸ್ಟೇಟ್,<br>ಕತ್ತಲೆಕಾಡು ಗ್ರಾಮ, ಕಡಗದಾಳು ಅಂಚೆ,<br>ಮಡಿಕೇರಿ ತಾಲೂಕು<br>ಮೊ.ನಂ. : 9448141502 |
| **ಡಾ. ದಯಾನಂದ ಕೂಡಕಂಡಿ** | : | ಬಿನ್. ಚಂದ್ರಹಾಸ ಕೂಡಕಂಡಿ<br>ತಾವೂರು ಗ್ರಾಮ, ಭಾಗಮಂಡಲ<br>ಮಡಿಕೇರಿ ತಾಲೂಕು<br>ಮೊ. ನಂ. : 9449766772<br>dayanandakudakandi@gmail.com |
| **ಶ್ರೀ ಕುಸುಮಾಧರ ಎ.ಟಿ.** | : | ಬಿನ್. ತ್ಯಾಂಪಣ್ಣಗೌಡ<br>ಅಳಿಕೆ ಮಜಲು ಮನೆ<br>ಕಾಯರ್ತೋಡಿ, ಸುಳ್ಯ<br>ಮೊ. ನಂ. : 7090133686 |

**ಡಾ. ವಿಶ್ವನಾಥ ಬದಿಕಾನ** : ಬಿನ್. ಹೂವಪ್ಪಗೌಡ ಬದಿಕಾನ
ನಂ. 9-88/9, ಪ್ಲಾಟ್ ನಂ. 407(34)
ಧ್ರುವ ರೆಸಿಡೆನ್ಸಿ, ಯಕ್ಕೂರು,
ಕಂಕನಾಡಿ-575002,
ಮಂಗಳೂರು, ದಕ್ಷಿಣ ಕನ್ನಡ
ಮೊ. ನಂ. : 9449615474

**ಶ್ರೀ ಜಯಪ್ರಕಾಶ್ ಗೌಡ ಮೋಂಟಡ್ಕ** : ಕೌಸ್ತುಭ ನಿಲಯ, ಬಿಳಿಮಲೆ ಗ್ರಾಮ
ನೆಟ್ಟಣ ಅಂಚೆ, ಕಡಬ ತಾಲೂಕು
ದಕ್ಷಿಣ ಕನ್ನಡ-574 230
ಮೊ. ನಂ. : 9480293464

**ಶ್ರೀ ಪುರುಷೋತ್ತಮ ಕಿರ್ಲಾಯ** : ಬಿನ್. ದೇವಣ್ಣಗೌಡ ಕೆ.
ಕಿರ್ಲಾಯ ಮನೆ
ಅರಂತೋಡು ಗ್ರಾಮ ಮತ್ತು ಅಂಚೆ
ಸುಳ್ಯ ತಾಲೂಕು, ದಕ್ಷಿಣ ಕನ್ನಡ
ಮೊ. ನಂ. : 9449770439

**ಡಾ. ಪುರುಷೋತ್ತಮ ಕರಂಗಲ್ಲು** : 'ಚಾಣಕ್ಯ'
ಸರಕಾರಿ ಪ್ರಥಮ ದರ್ಜೆ ಕಾಲೇಜು
ಮುಂಭಾಗ, ಗಾಂಧಿನಗರ, ಕಾವೂರು,
ಮಂಗಳೂರು, ದ.ಕ-575015.
ಮೊಬೈಲ್ : 9448216070

**ಶ್ರೀ ಭರತೇಶ್ ಅಲಸಂಡೆಮಜಲು** : ಅಲಸಂಡೆಮಜಲು ಮನೆ
ಕೊಲ್ತಿಗೆ ಗ್ರಾಮ, ಪುತ್ತೂರು ತಾಲೂಕು
ದಕ್ಷಿಣ ಕನ್ನಡ-574 212,
ಮೊ. ನಂ. : 9008027271

**ಶ್ರೀ ಕಿರಣ್ ಕುಂಬಳಚೇರಿ** : ಬಿನ್. ಕೇಶವ ಕೆ.ಎಸ್. ಕುಂಬಳಚೇರಿಮನೆ
ಪೆರಾಜೆ ಗ್ರಾಮ ಮತ್ತು ಅಂಚೆ
ಮಡಿಕೇರಿ ತಾಲೂಕು, ಕೊಡಗು ಜಿಲ್ಲೆ
ಮೊ. ನಂ. : 9164069225

ರಿಜಿಸ್ಟ್ರಾರ್
**ಶ್ರೀ ಚಿನ್ನಸ್ವಾಮಿ**
ಪಸಯ್ಯನಪುರ ಗ್ರಾಮ,
ಕಲೀಗೌಡನಹಳ್ಳಿ, ಗುಂಡ್ಲುಪೇಟೆ ತಾಲ್ಲೂಕು
ಚಾಮರಾಜನಗರ ಜಿಲ್ಲೆ
ಮೊ: 9945045327

ಅರ್ಥ ಸದಸ್ಯರು
**ಶ್ರೀಮತಿ ಕೆ.ಟಿ.ದರ್ಶನ**
ಸಹಾಯಕ ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಕೊಡಗು ಜಿಲ್ಲೆ, ಮಡಿಕೇರಿ
ಮೊ: 9483110593

## ಲೇಖಕರ ಹೆಸ್ರ್ ಮತ್ತೆ ವಿಳಾಸ :

| | | |
|---|---|---|
| ದೇವಿಪ್ರಸಾದ್ ಅಮೆಮನೆ | : | ತಾವೂರು ಗ್ರಾಮ, ಭಾಗಮಂಡಲ<br>ಮೊ. : 7259979089 |
| ಮಂದ್ರೀರ ತೇಜಸ್ ನಾಣಯ್ಯ | : | ಕಗ್ಗೋಡ್ಲು, ಮಡಿಕೇರಿ<br>ಮೊ. : 9448178174 |
| ಚೊಕ್ಕಾಡಿ ಪ್ರೇಮ ರಾಘವಯ್ಯ | : | ಟಿ. ಜಾನ್ ಲೇಔಟ್, ಮಡಿಕೇರಿ<br>ಮೊ. : 9900992360 |
| ಕುಂಞೇಟಿ ಶಿವರಾಮಗೌಡ | : | ಕೊಲ್ಲಮೊಗ್ರ, ಸುಳ್ಯ<br>ಮೊ. : 8762121694 |
| ಬಾರಿಯಂಡ ಜೋಯಪ್ಪ | : | ಮದೆ ಗ್ರಾಮ ಮತ್ತು ಅಂಚೆ<br>ಮಡಿಕೇರಿ ತಾಲೂಕು<br>ಮೊ. : 9481770584 |
| ಎಂ.ವಿ. ಮೋಹನ್‌ಕುಮಾರ್ | : | ಬದ್ರಗೋಳ ಗ್ರಾಮ, ತಾರಿಕಟ್ಟೆ, ತಿತಿಮತ್ತಿ |
| ಕಾವೇರಿಮನೆ ಡಾ॥ ಬೋಜಪ್ಪ | : | ಸಣ್ಣಪುಲಿಕೋಟ್ ಗ್ರಾಮ<br>ಭಾಗಮಂಡ್ಲ ನಾಡ್ |
| ಬೈತಡ್ಕ ಜಾನಕಿ ಬೆಳ್ಯಪ್ಪ | : | 21–16, ರೇಸ್‌ಕೋರ್ಸ್ ರಸ್ತೆ,<br>ಎಲ್.ಐ.ಸಿ. ಕಛೇರಿ ಹತ್ತಿರ, ಮಡಿಕೇರಿ<br>ಮೊ. : 9008571899 |
| ಹೊಳೆಕರೆ ಚೆಂಗಪ್ಪ | : | ನಂ. 30, 3ನೇ ಹೆಚ್. ಕ್ರಾಸ್<br>ರುಕ್ಮಿಣಿನಗರ, ನಾಗಸಂದ್ರ, ಬೆಂಗಳೂರು.<br>ಮೊ. : 9945791209 |
| ಸೀತಾರಾಮ ಕೇವಳ | : | ಪ್ರಾಂಶುಪಾಲರು, ವಿದ್ಯಾರಶ್ಮಿ ವಿದ್ಯಾಲಯ<br>ಸವಣೂರು, ಕಡಬ, ದ.ಕ. ಪಿನ್: 574 202.<br>ಮೊಬೈಲ್: 9448725813 |
| ಲೀಲಾ ದಾಮೋದರ | : | ಧಾತ್ರಿ, ವಲಯ ಅರಣ್ಯ ಕಛೇರಿ ಹತ್ತಿರ<br>ಗಾಂಧಿನಗರ, ಸುಳ್ಯ, ದ. ಕನ್ನಡ |
| ಕೂಡಕಂಡಿ ಓಂಶ್ರೀ ದಯಾನಂದ | : | ತಾವೂರು ಗ್ರಾಮ, ಭಾಗಮಂಡಲ ಅಂಚೆ<br>ಮಡಿಕೇರಿ. ಮೊ.: 6363376487. |
| ಡಾ. ಪುರುಷೋತ್ತಮ ಕೆ.ವಿ | : | 'ಚಾಣಕ್ಯ' ಸರಕಾರಿ ಪ್ರಥಮ ದರ್ಜೆ ಕಾಲೇಜು<br>ಮುಂಭಾಗ, ಗಾಂಧಿನಗರ, ಕಾವೂರು,<br>ಮಂಗಳೂರು, ದ.ಕ–575015.<br>ಮೊಬೈಲ್:9448216070 |
| ಶಿವದೇವಿ ಅವನೀಶಚಂದ್ರ | : | ಸುಳ್ಯಕೋಡಿ, ಸೋಮವಾರಪೇಟೆ |

| | | |
|---|---|---|
| ಎಸ್.ಕೆ. ಈಶ್ವರಿ | : | ಮೇಕೇರಿ ಗ್ರಾಮ, ಕಗ್ಗೋಡ್ಲು ಅಂಚೆ |
| ಪಿ.ಜಿ. ಅಂಬೆಕಲ್ | : | ನಂ:203, ವಿಶ್ವಾಸ್ ಡ್ಯಾಫೋಡಿಲ್ಸ್, ರಾಮಚಂದ್ರಪುರ, ಜಾಲಹಳ್ಳಿ ಪೋಸ್ಟ್, ಬೆಂಗಳೂರು–560013 ದೂ.ಸಂ: 9481390089 |
| ಮಾನ್ಯತಾ ಬೈತಡ್ಕ | : | ನಂ. 3, ಕನ್ನಿಕಾ ಬಡಾವಣೆ, ಮಡಿಕೇರಿ |
| ಶ್ರೀ ಭರತೇಶ್ ಅಲಸಂಡೆಮಜಲು | : | ಅಲಸಂಡೆಮಜಲು ಮನೆ ಕೊಲ್ತಿಗೆ ಗ್ರಾಮ, ಪುತ್ತೂರು ತಾಲೂಕು ದಕ್ಷಿಣ ಕನ್ನಡ–574 212, ಮೊ. ನಂ. : 9008027271 |
| ರೇಖಾ ಕುದುಪಜೆ | : | ತಣ್ಣಿಮಾನಿ ಗ್ರಾಮ, ಭಾಗಮಂಡಲ |

## ಹಿಂಗಾರಕೆ ನೀವೂ ಬರೆನಿ

ಹಿಂಗಾರ ತ್ರೈಮಾಸಿಕ ಪತ್ರಿಕೆಗೆ ನೀವು ಕತೆ, ಪದ್ಯ, ಲೇಖನ, ಅಡುಗೆ, ಅನುಭವ, ಗಾದೆ, ಪದಕೋಶ ಇಂತದರೆಲ್ಲ ಬರ್ದ್ ಕಳ್ಸಿ. ಪ್ರಕಟಣೆಗೆ ಆಯ್ಕೆ ಆದ ಸಾಹಿತ್ಯನ ಪ್ರಕಟಿಸಿವೆ. ಹೊಸದಾಗಿ ಬರೆವು ಬರ್ದರ ಒಮ್ಮೆ, ಇಮ್ಮೆ, ಮತ್ತೊಮ್ಮೆ ಓದಿ ತಿದ್ದಿ ಬರೆನಿ. ಮನ್ಸಿಗೆ 'ಈಗ ಸರಿ ಆತ್'ತ ಆದ ಮೇಲೆ ಫುಲ್‌ಸ್ಕೇಪ್ ಹಾಳೆಲಿ 4 ಪುಟಕ್ಕೆ ಮೀರದಂಗೆ ಒಂದೇ ಕಡೆ ಬರೆನಿ. ಮಾರ್ಜಿನ್ ಬುಟ್ಟ್ ಬರೆನಿ. ಬರವಣಿಗೆ ನಿಮ್ಮ ಸೊಂತದ್ದಾಗಿರ್‌ಲಿ. ಅದೇ ಹಾಳೆಲಿ ನಿಮ್ಮ ಪೂರ್ತಿ ಹೆಸ್ರ್, ವಿಳಾಸ, ದೂರವಾಣಿ ಸಂಖ್ಯೆನ ಕಡ್ಡಾಯ ಆಗಿ ಬರೆನಿ.

ಹಿಂಗಾರದ ವಿಳಾಸ : **ಸಂಪಾದಕರ್**
ಹಿಂಗಾರ ತ್ರೈಮಾಸಿಕ ಪತ್ರಿಕೆ
ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
1ನೇ ಮಹಡಿ, ಕಾಫಿಕೃಪಾ, ರಾಜಾಸೀಟ್ ರಸ್ತೆ,
ಮಡಿಕೇರಿ – 571 201, ಕೊಡಗು ಜಿಲ್ಲೆ
ಇ–ಮೇಲ್ : arebaseacademy@gamil.com
ವೆಬ್‌ಸೈಟ್ : www.arebhasheacademy.com
ದೂರವಾಣಿ : 08272 223055

## ಅಕಾಡೆಮಿದ್ ಪ್ರಕಟಣೆಗ

1 ಸರ್ಮಾಲೆ : ಎಂ.ಜಿ. ಕಾವೇರಮ್ಮ
2 ಅಜ್ಜಪ್ಪನ ಕತಾ ಭಂಡಾರಂದ ಹೆರ್ಕಿದ ಕತೆಗ : ಎಂ.ಜಿ. ಕಾವೇರಮ್ಮ
3 ಬೇರ್‌ಲಿ ಚಿಗ್‌ರ್ : ಬೈತಡ್ಕ ಜಾನಕಿ ಬೆಳ್ಯಪ್ಪ
4 ಕುಂಕುಮ : ಪೂಜಾರೀರ ಜಿ. ಮಾದಪ್ಪ
5 ಬೊಲ್ಪಾಕನ ಮುಗ್ತ್ : ವಿದ್ವಾನ್ ಟಿ.ಜಿ. ಮುಡೂರು
6 ಬೇಟೆನ ಬಿರ್ಸ– ಬಡ್ಡಡ್ಕ ಅಪ್ಪಯ್ಯ ಗೌಡ್ರು : ವೇದಾವತಿ ಅನಂತ ಬಡ್ಡಡ್ಕ
7 ಬೆಳ್ಳಿಮುಷ್ಠಿ : ಕಟ್ರತನ ಕೆ. ಬೆಳ್ಯಪ್ಪ
8 ತೋರಣ : ಬಾರಿಯಂಡ ಆರ್. ಜೋಯಪ್ಪ
9 ಬೊಲ್ಪು : ಲೋಕೇಶ್ ಕುಂಚಡ್ಕ
10 ಮತ್ತೆ ಸಿಕ್ಕಿತ್ ಕುಂಕುಮ : ಕಟ್ರತನ ಲಲಿತ ಅಯ್ಯಣ್ಣ
11 ನೆಂಪುಗಳ ರಂಗೋಲಿ : ಎಂ.ಜಿ. ಕಾವೇರಮ್ಮ
12 ಹೊಸ ಬೊದ್ಕ್ : ಉದಯಕುಮಾರಿ, ಚೆಂಬು.
13 ಸಂಸ್ಕೃತಿ ಸಂಪತ್ತ್ : ಅರೆಭಾಷೆ ಸಂಸ್ಕೃತಿ ಪರಿಚಯ
14 ಬೆಳ್ಳಿ ಚುಕ್ಕೆಗ : ಬೈತಡ್ಕ ಜಾನಕಿ ಬೆಳ್ಯಪ್ಪ
15 ಅನುಭವಧಾರೆ : ಹೊದ್ದೆಟ್ಟಿ ಭವಾನಿಶಂಕರ
16 ರುಚಿ : ಅರೆಭಾಷೆ ಸಂಪ್ರದಾಯದ ಅಡಿಗೆ.
17 ಸಫಲ : ಅರೆಭಾಷೆ ಅಕಾಡೆಮಿಯ 2ನೇ ಸಮಿತಿಯ 3 ವರ್ಷಗಳ ಸಾಧನೆ.
18 ಬದುಕು : ಎಂ.ಜಿ.ಕಾವೇರಮ್ಮ
19 ನೆಂಪುನ ಜೊಂಪೆ : ವಿನೋದ್ ಮೂಡಗದ್ದೆ
20 ಕಾಡ್‌ನ ಮಕ್ಕ : ಕೆ.ಆರ್.ತೇಜ ಕುಮಾರ್
21 ಅಪ್ಪ ಹೇಳ್ದ ಹತ್ತ್ ಕತೆಗ : ಭವಾನಿ ಶಂಕರ್ ಅಡ್ತಲೆ
22 ನೆಗೆ ಬೇಕ್ ಕೇದಗೆ ಗೊನೆ ಹಾಂಗೆ: ಡಾ॥ ಕರುಣಾಕರ ನಿಡಂಜಿ
23 ತಬ್ಲಿ ಮಂಜ : ಪಿ.ಜಿ.ಅಂಬೆಕಲ್
24 ಮಿಂಪುಳಿ : ಡಾ॥ ಪುನೀತ್ ರಾಘವೇಂದ್ರ ಕುಂಟುಕಾಡು
25 ಅರೆಬಾಸೆ ವ್ಯಾಕರಣ : ಪ್ರೊ. ಕೆ. ಕುಶಾಲಪ್ಪ ಗೌಡ



ಅವಂದೂರು ಗ್ರಾಮಲಿ ನಡ್ದ ಅರೆ ಬಾಸೆ ಸಂಸ್ಕೃತಿಲಿ ಕಿಡ್ಡಾಸ ಹಬ್ಬದ ಉದ್ಘಾಟನೆ.



ಅರೆಬಾಸೆ ಜಾನಪದ ಕಲಾವಿದರಿಗೆ ಸಾಂಸ್ಕೃತಿಕ ಪರಿಕರಗಳ ವಿತರಣೆ



ರಾಜಸೀಟ್ ಉದ್ಯಾನವನಲಿ 'ಫಲಪುಷ್ಪ ಪ್ರದರ್ಶನ
ಕಾರ್ಯಕ್ರಮಲಿ' ಅರೆಬಾಸೆ ಗೌಡ ಸಾಂಸ್ಕೃತಿಕ ಕಾರ್ಯಕ್ರಮ




ಕುಕ್ಕೆಶ್ರೀ ಸುಬ್ರಹ್ಮಣ್ಯೇಶ್ವರ ಮಹಾವಿದ್ಯಾಲಯ ಸುಬ್ರಹ್ಮಣ್ಯಲಿ
"ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಸಂಘ" ಉದ್ಘಾಟನೆ




ಮೈಸೂರು ರಂಗಾಯಣ 'ಬಹುರೂಪಿ ನಾಟಕೋತ್ಸವ'ಲಿ ಅರೆಬಾಸೆ ಸಂಸ್ಕೃತಿ ಅನಾವರಣ



ನಿಡ್ತಲಿ ನಡ್ದ 14ನೇ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನಲಿ ಅರೆಬಾಸೆ ಜಾನಪದ ಕೋಲಾಟ

**HINGARA** Arebhashe Quarterly Volume -4, Issue -1
Date : 31.03.2020 Kodagu KARARB/2016/69571 Price : 20/- Pages : 80



2ನೇ ಅರೆಬಾಸೆ ಸಾಹಿತ್ಯ ಸಮ್ಮೇಳನದ ಉದ್ಘಾಟನೆ




2ನೇ ಅರೆಬಾಸೆ ಸಾಹಿತ್ಯ ಸಮ್ಮೇಳನ-2020 ರ ಉದ್ಘಾಟಿಸಿ ಮಾತನಾಡ್‌ತಿರ್‌ವ ಕೇಂದ್ರ ರಾಸಾಯನಿಕ ಮತ್ತು ರಸಗೊಬ್ಬರ ಖಾತೆ ಸಚಿವರ್ ಸನ್ಮಾನ್ಯ ಶ್ರೀ ಡಿ.ವಿ. ಸದಾನಂದಗೌಡ.



ಚೆಂಬುಲಿ ನಡ್ಡ ಅರೆಬಾಸೆ ಸಿರಿ ಸಂಸ್ಕೃತಿ ಮತ್ತೆ ಕೆಡ್ಡಾಸ ಹಬ್ಬದ ಉದ್ಘಾಟನೆ

Printed by **Chinnaswamy** on behalf of Registrar, **Karnataka Arebhase Samskruthi Mathu Sahitya Academy**, and, Published by **Chinnaswamy** on behalf of **Karnataka Arebhase Samskruthi Mathu Sahithya Academy** (name of Owner) and Printed at **Sri Krishna Computers & Printers**, Pooja Arcade, Madikeri. And Published at **Karnataka Arebhashe Samskruthi Mathu Sahithya Academy**, Coffee Krupa Building, 1st Floor, Raja Seat Road, Madikeri, Kodagu District. Editor : **Dr. Dayananda Kudakandi**




# ಹಿಂಗಾರ



ಅರೆಭಾಷೆ ತ್ರೈಮಾಸಿಕ

ಸಂಪುಟ-4 ಸಂಚಿಕೆ-1 ದಿನಾಂಕ : 31.03.2020 ಕೊಡಗು ರೂ. 20/-

ಜನವರಿ - ಫೆಬ್ರವರಿ - ಮಾರ್ಚ್

2020



ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ